# ಪ್ರಕಾಶಕರ ನಾಲ್ಕು ಮಾತು



ಭಾರತ ಸ್ವಾತಂತ್ರ್ಯೋತ್ಸವದ ಇಂದಿನ ಶುಭದಿನದಲ್ಲಿ, ನಮ್ಮ **ಶರತ್ ಪ್ರಕಾಶನಮಂದಿರವನ್ನು** ಪ್ರಾರಂಭಿಸಲಾಗಿದೆಯೆಂದು ತಿಳುಹಲು ತುಂಬ ಸಂತೋಷವೆನಿಸುತ್ತದೆ. ಮೊತ್ತಮೊದಲಾಗಿ 'ಆನಂದಕಂದ'ರ (ಶ್ರೀ ಬೆಟಗೇರಿ ಕೃಷ್ಣಶರ್ಮರ) ಎಲ್ಲ ಹಳೆಯ ಹೊಸ ಗ್ರಂಥಗಳು ಒಂದೆಡೆಯಲ್ಲಿ ದೊರೆಯುವಂತೆ, ಮುದ್ರಿಸಿ ಪ್ರಕಟಿಸುವ ಕೆಲಸವನ್ನು ನಮ್ಮ ಪ್ರಕಾಶನ ಮಂದಿರ ಕೈಕೊಂಡಿದೆ; ಅಲ್ಲದೆ, ಕನ್ನಡದಲ್ಲಿಯ ಬೇರೆ ಬೇರೆ ಸುಪ್ರಸಿದ್ಧ ಸಾಹಿತ್ಯಿಕರ ಲಲಿತ ಸಾಹಿತ್ಯಗ್ರಂಥಗಳನ್ನೂ, ಜೀವನಸ್ವಾಸ್ಥ್ಯಕ್ಕೆ ಆವಶ್ಯಕ ವೆನಿಸುವಂತಹ ವಿಚಾರಪ್ರಚೋದಕ ಗ್ರಂಥಗಳನ್ನೂ, ಒಳ್ಳೆಯ ರೀತಿಯಿಂದ ಸಂಪಾದಿತವಾದ ಹಳಗನ್ನಡ ಗ್ರಂಥಗಳನ್ನೂ ಪ್ರಕಟಿಸುವ ಉದ್ದೇಶವನ್ನಿಟ್ಟು ಕೊಂಡಿದೆ.

ನಮ್ಮ ಈ ಪ್ರಕಾಶನಸಂಸ್ಥೆ ಕಾಲನಿಯಮವನ್ನಿರಿಸಿಕೊಂಡ ಗ್ರಂಥ ಮಾಲೆಯನ್ನೇನೂ ನಡೆಯಿಸುವುದಿಲ್ಲವಾದರೂ, ಆಗಾಗ ಹೊಸ ಹೊಸ ಪ್ರಕಟನೆ ಗಳನ್ನು ಬೆಳಕಿಗೆ ಹಾಕುವುದು. ಗ್ರಂಥಮಾಲೆಯಲ್ಲವಾದುದರಿಂದ, ಚಂದಾ ದಾರರಾಗಬೇಕಾದ ಅವಕಾಶವಿದರಲ್ಲಿ ಇಲ್ಲ; ಆದರೆ ಎರಡು ರೂಪಾಯಿ ಇಡುಗಂಟನ್ನಿರಿಸಿ, ನಮ್ಮ ಮಂದಿರದ ಗ್ರಾಹಕಸದಸ್ಯರಾಗಬಹುದು. ಅಂತಹ ಗ್ರಾಹಕಸದಸ್ಯರಿಗೆ, ಪ್ರಕಟವಾದ ಪ್ರತಿಯೊಂದು ಗ್ರಂಥವನ್ನೂ ೩ ಬೆಲೆಗೆ ಕೊಡಲಾಗುವುದು. ಪ್ರಕಟವಾಗಲಿರುವ ಪುಸ್ತಕವನ್ನು, ಮೊದಲು ಪ್ರಕಟ ವಾದ ಪುಸ್ತಕದಲ್ಲಿ ಸೂಚಿಸಲಾಗುತ್ತದೆ. ಇಷ್ಟವಿರದ ಪುಸ್ತಕಗಳನ್ನು ಕಳಿಸ ದಿರುವಂತೆ ಮೊದಲೇ ತಿಳುಹಿದರೆ, ಅದರಂತೆ ಏರ್ಪಾಡು ಮಾಡಲಾಗುವುದು. ಕೆಲವು ದಿನ ಗ್ರಾಹಕಸದಸ್ಯರಾಗಿದ್ದು, ಮುಂದೆ ನಮ್ಮ ಪ್ರಕಟನೆಗಳು ಬೇಡ ವೆನಿಸಿದರೆ, ಗ್ರಾಹಕ ಸದಸ್ಯತ್ವದ ಇಡುಗಂಟಿನ ೨ ರೂಪಾಯಿಗಳನ್ನು ಮರಳಿ ಸಲ್ಲಿಸಲಾಗುವುದು ಪುಸ್ತಕಭಾಂಡಾರ, ವಾಚನಾಲಯ, ಪಾಠಶಾಲೆಗಳಂತಹ ಸಂಸ್ಥೆಗಳೂ ನಮ್ಮ ಮಂದಿರದ ಗ್ರಾಹಕಸದಸ್ಯವರ್ಗದಲ್ಲಿ ಸೇರಬಹುದು.

ಮೊದಲನೆಯ ಪ್ರಕಟನೆಯನ್ನಾಗಿ ಈ **ಬೆಳವಡಿ ಮಲ್ಲಮ್ಮ** ಎಂಬ ಹೆಸರಿನ ರಸವತ್ತಾದ ತರಂಗರೂಪಕ ಸಂಕಲನವನ್ನು ಕನ್ನಡ ವಾಚಕರ ಕೈಗೆ ಒಪ್ಪಿಸುತ್ತಿದ್ದೇವೆ. ಇನ್ನು ಮುಂದೆ ಪ್ರಕಟವಾಗಲಿರುವುದು, 'ಆನಂದಕಂದ'ರದೊಂದು ಹೊಸ ಸಾಮಾಜಿಕಕಾದಂಬರಿ. ಮುಂದಿನವನ್ನು ಕಾಲಕಾಲಕ್ಕೆ ತಿಳಿಸುತ್ತ ಹೋಗುವೆವು.

ಕಾಗದ-ಮುದ್ರಣಗಳ ಬೆಲೆ ವಿಪರೀತ ಹೆಚ್ಚಿರುವುದರಿಂದ, ನಮ್ಮ ಪ್ರಕಟನೆಗಳನ್ನು ನಿಯಮಿತಸಂಖ್ಯೆಯಲ್ಲಿಯೇ ಪ್ರಕಟಿಸಲಾಗುವುದು. ಆದುದರಿಂದ, ಗ್ರಾಹಕ ಸದಸ್ಯರಾಗಲು ಬಯಸುವವರು ಬೇಗನೆ ಬರೆದು ತಿಳುಹಿ, ತಮ್ಮ ಹೆಸರುಗಳನ್ನು ಮಂದಿರದ ಗ್ರಾಹಕಸದಸ್ಯರ ಪಟ್ಟಿಗೆ ಸೇರ್ಪಡೆ ಮಾಡಬೇಕು.

ನಮಗೆ ಎಲ್ಲ ಬಗೆಯ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟು, ಈ ರೂಪಕ ಸಂಕಲನವನ್ನು ಅಂದವಾಗಿ ಮುದ್ರಿಸಿಕೊಟ್ಟುದಕ್ಕಾಗಿ, ಇಲ್ಲಿಯ ಮೋಹನ ಮುದ್ರಣಾಲಯದ ಒಡೆಯರಾದ ಶ್ರೀಮಾನ್ ಎಸ್. ಎಲ್. ಜೋಶಿಯವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

ಶರತ್ ಪ್ರಕಾಶನ ಮಂದಿರ
ಧಾರವಾಡ
೧೫ನೆಯ ಆಗಸ್ಟ್ ೧೯೫೦

**ಎಸ್. ಡಿ. ಇನಾಮದಾರ**
ಸಂಚಾಲಕ

---

# ಮುನ್ನುಡಿ

★

ನನ್ನ ಲೇಖನಕ್ಷೇತ್ರದಲ್ಲಿ, ಇದೊಂದು ಹೊಸಹಾದಿಯಲ್ಲಿಟ್ಟ ಹೆಜ್ಜೆ ಆಕಾಶವಾಣಿ ಹುಟ್ಟಿ, ಭಾರತಕ್ಕೆ ಬಂದು ಅದೆಷ್ಟೋ ಕಾಲ ಗತಿಸಿದ್ದರೂ, ಕನ್ನಡಿಗರ ಜೀವನಕ್ಕೆ ಅದು ಆಕಾಶದಷ್ಟು ದೂರದುದಾಗಿಯೆ ಉಳಿದು ಬಿಟ್ಟಿತು. ಅನೇಕ ದಿನ, ಆಕಾಶವಾಣಿಯ ಯಾವ ಕೇಂದ್ರದಲ್ಲಿಯೂ ಕನ್ನಡದ ಒಂದು ನುಡಿಯೂ ಕಿವಿಗೆ ಬೀಳುತ್ತಲಿರಲಿಲ್ಲ. ಇಂದು ಭಾರತಸ್ವಾತಂತ್ರ್ಯ-ದೊಂದಿಗೆ ಕನ್ನಡನುಡಿಯೂ ಒಂದು ಮನ್ನಣೆಯ ಸ್ಥಾನವನ್ನು ಪಡೆದು ಕೊಂಡಿದೆ. ಎಂತಲೆ ಕನ್ನಡಿಗರಿಗಾಗಿಯೇ ಎರಡು ಕೇಂದ್ರಗಳಿಂದ ಆಕಾಶ ವಾಣಿ, ಕನ್ನಡಿಗರ ಕಲೆಯನ್ನೂ ಸಂಸ್ಕೃತಿಯನ್ನೂ ರಾಜಕೀಯ-ಸಾಮಾಜಿಕ ವಿಚಾರಗಳನ್ನೂ ಕುರಿತು ನಿತ್ಯವೂ ಉಗ್ಗಡಿಸುತ್ತಿರುತ್ತದೆ; ಪ್ರಪಂಚಕ್ಕೆಲ್ಲ ಕನ್ನಡದ ಅಸ್ತಿತ್ವವನ್ನು ನೆನಪಿಗೆ ತಂದುಕೊಡುತ್ತಲಿದೆ.

ಕನ್ನಡಿಗರಿಗೆ ಮೊದಮೊದಲು, ಆಕಾಶವಾಣಿಯ ಬಿತ್ತರಣೆಯ ತಂತ್ರ-ಗಳೆಲ್ಲ ತೀರ ಅಪರಿಚಿತವಾಗಿದ್ದುವಾದರೂ, ಇಂದು ಬಹುಜನ ಕಲಾವಿದರೂ, ಸಾಹಿತ್ಯಿಕರೂ, ವಿದ್ವಾಂಸರೂ, ಬುದ್ಧಿಶಾಲಿಗಳೂ ಅವುಗಳ ಪರಿಚಯವನ್ನು ಸಾಕಷ್ಟು ಮಾಡಿಕೊಂಡಿದ್ದಾರೆ. ಆಕಾಶವಾಣಿಯ ಯಂತ್ರಕ್ಕೆ ತಕ್ಕ ಧ್ವನಿ ಯಲ್ಲಿ ಹಾಡುವ ಕನ್ನಡ ಸಂಗೀತಗಾರರು ಸಾಕಷ್ಟು ಜನ ಮುಂದೆ ಬಂದಿದ್ದಾರೆ; ಅಲ್ಲಿ ನಾಟಕಗಳನ್ನಾಡುವ ನಟ-ನಟಿಯರ ಬಳಗವೂ ದಿನದಿನಕ್ಕೆ ಹೆಚ್ಚುತ್ತಲಿದೆ. ಆಕಾಶವಾಣಿಗೆ ಬೇಕಾಗುವಂತಹ ನಾಟಕ-ನಾಟಿಕೆಗಳನ್ನು ಬರೆಯುವ ಕಲೆಯನ್ನು ನಮ್ಮ ಸಾಹಿತ್ಯಿಕರು ಸಾಧಿಸಿಕೊಳ್ಳಲು ತೊಡಗಿದ್ದಾರೆ. ಅಂತಹ ಸಾಧನೆಯ ಕಾಲದ ಕೃತಿಗಳೇ, ಈ ಸಂಕಲನದಲ್ಲಿಯ ಆರು ರೂಪಕ ಗಳು

ಇವೆಲ್ಲ ರೂಪಕಗಳು, ಧಾರವಾಡದ ಅಖಿಲಭಾರತ ಆಕಾಶವಾಣಿ ಕೇಂದ್ರದವರು ಆಗಾಗ ಹೇಳಿ ಬರೆಯಿಸಿ ಬಿತ್ತರಿಸಿದುವು. ಬಿತ್ತರಿಸಿದಾಗ

ಕೇಳಿ ಆನಂದ ಪಟ್ಟ ಸಹೃದಯರು, ಈ ರೂಪಕಗಳ ಸ್ವಾರಸ್ಯವನ್ನು ಮೆಚ್ಚಿ ಮನವಾರೆ ಕೊಂಡಾಡಿದರು !! ಮುಂದೆ ಇವು ಒಂದೊಂದಾಗಿ ಜಯಂತಿಯಲ್ಲಿ ಪ್ರಕಟವಾದಾಗ, ಇವುಗಳನ್ನು ಓದಿ ಮೆಚ್ಚಿ ಪ್ರಶಂಸೆಯ ಮಳೆಗರೆದವರೂ ಹಲವು ಜನರು. ತರಂಗರೂಪಕ ಲೇಖನವು ಕನ್ನಡ ಲೇಖಕರಿಗಿನ್ನೂ ಅಪ-ರಿಚಿತವಿರುವುದರಿಂದಲೂ, ಕನ್ನಡ ಆಕಾಶವಾಣಿ ಕೇಂದ್ರಗಳು ತರಂಗರೂಪಕಗಳನ್ನು ದಿನದಿನವೂ ಅಪೇಕ್ಷಿಸುತ್ತಿರುವುದರಿಂದಲೂ, ತರಂಗರೂಪಕದ ಮಾದರಿಗಳೆಂದು ಇವುಗಳನ್ನೆಲ್ಲ ಒಂದೆಡೆ ಸಂಕಲನಗೊಳಿಸಿ, ಈ ಪುಸ್ತಕವನ್ನು ಕನ್ನಡಿಗರೆಲ್ಲರ ಕಣ್ಣೆದುರು ಇರಿಸಬೇಕೆಂದು ಬಯಸಿದೆನು. ನನ್ನ ಬಯಕೆಯನ್ನು ಶರತ್‌ಪ್ರಕಾಶನಮಂದಿರದ ಸಂಚಾಲಕರು ಸಂತೋಷದಿಂದ ಪೂರಯಿಸಲು ಸಿದ್ಧರಾಗಿ ಮುಂದೆ ಬಂದರು. ನನ್ನಿಂದ ಈ ರೂಪಕಗಳನ್ನು ಬರೆಯಿಸಿ, ತರಂಗರೂಪಕ ಲೇಖನದಲ್ಲಿ ಪ್ರಯತ್ನ ಮಾಡಹಚ್ಚಿದ ಧಾರವಾಡದ ಆಕಾಶವಾಣಿಕೇಂದ್ರದ ಅಧಿಕಾರಿಗಳಿಗೂ, ಬರೆದುವುಗಳನ್ನೆಲ್ಲ ಸಂಕಲನಗೊಳಿಸಿ ಗ್ರಂಥವನ್ನಾಗಿ ಪ್ರಕಟಿಸಿದ ಶರತ್‌ಸಾಹಿತ್ಯಮಂದಿರದಿಂದ ಸಂಚಾಲಕರಿಗೂ ಕೃತಜ್ಞತೆಯ ವಂದನೆಗಳು ಅವಶ್ಯವಾಗಿ ಸಲ್ಲಬೇಕು.

ತರಂಗರೂಪಕಗಳು ಎಂದರೆ ರೇಡಿಯೊ ನಾಟಕಗಳು, ಕೇವಲ ಧ್ವನಿಯೊಂದರ ಸಾಧನದಿಂದಲೆ ಕತೆಯನ್ನೂ ಸನ್ನಿವೇಶಗಳನ್ನೂ ರಸಭಾವಗಳನ್ನೂ ಅಭಿವ್ಯಕ್ತಗೊಳಿಸಬೇಕಾಗುತ್ತದೆ. ಹಿನ್ನೆಲೆಯ ಕಲ್ಪನೆಯನ್ನೂ ವಿವಿಧ ಪ್ರಕಾರದ ಧ್ವನಿಗಳಿಂದಲೇ ಮಾಡಿಕೊಡಬೇಕಾಗುವುದು. ರಂಗಭೂಮಿಯ ನಾಟಕಗಳಿಗೆ ಅತ್ಯವಶ್ಯವಾಗಿರುವ ಪ್ರತ್ಯಕ್ಷರೂಪ, ಅಭಿನಯ, ಸನ್ನಿವೇಶ ರಚನೆ, ಹಿನ್ನೆಲೆಯ ನೋಟ ಇವೊಂದೂ ತರಂಗನಾಟಕಗಳಲ್ಲಿರುವುದಿಲ್ಲ. ಕೇವಲ ಧ್ವನಿವಿಕಾರಗಳಿಂದಲೇ ಎಲ್ಲವನ್ನೂ ಪೂರ್ಣಗೊಳಿಸಿ ತೋರಿಸಬೇಕಾಗುವುದು. ಆದುದರಿಂದ, ರಂಗಭೂಮಿಯ ನಾಟಕಗಳಿಗಿಂತ ತರಂಗಭೂಮಿಯ ನಾಟಕಗಳನ್ನು ಬರೆಯುವುದು ಹೆಚ್ಚು ಪ್ರಯಾಸದ ಕಲಾಸಿದ್ಧಿಯಾಗಿದೆ. ಇವುಗಳನ್ನು ಬರೆಯುವುದಕ್ಕೆ ಬಳಸುವ ಕಲಾತಂತ್ರಗಳೇ ಬೇರೆಬಗೆಯವಾಗಿವೆ. ಅಂತಹ ತಂತ್ರದ ಬಳಕೆಯನ್ನೂ ಪರಿಣಾಮಫಲವನ್ನೂ ಇಲ್ಲಿಯ ಆರು ರೂಪಕಗಳಲ್ಲಿಯೂ ಕಾಣಬಹುದು.

ಮಿಂಚಿನ ದೀಪ, ಧ್ವನಿಪ್ರಸಾರಕಗಳ ಅನುಕೂಲತೆಯಿರುವ ನಗರಗಳಲ್ಲಿ, ಈ ರೂಪಕಗಳನ್ನು ಪ್ರತ್ಯಕ್ಷ ರಂಗಭೂಮಿಯ ಮೇಲೆ ಅಭಿನಯಿಸಿಯೂ ತೋರಿಸಬಹುದಾಗಿದೆ. ಅಲ್ಲದೆ, ಈ ರೂಪಕಗಳನ್ನು ಸಣ್ಣ ಕತೆಗಳಂತೆ ಓದಿಯೂ ರಸಾನಂದವನ್ನು ಪಡೆಯಬಹುದಾಗಿದೆ. ಇವುಗಳಲ್ಲಿ ಬರುವ ನಿವೇದಕನ ಮಾತುಗಳು, ಆಕಾಶವಾಣಿಯ ಬಿತ್ತರಣೆಯ ಕಾಲದಲ್ಲಿ ಕತೆಯ ಮುಂದುವರಿತವನ್ನೂ, ಸಂದರ್ಭ ಸಂಬಂಧಗಳನ್ನೂ ಸನ್ನಿವೇಶಚಿತ್ರಗಳನ್ನೂ ಶ್ರೋತೃಗಳಿಗೆ ಪರಿಚಯ ಮಾಡಿಕೊಡಲು ಉಪಯೋಗವಾಗುತ್ತಿದ್ದರೆ, ಓದುಗರಿಗೆ–ಕತೆಯ ಪಾತ್ರಗಳೂ ದೃಶ್ಯಗಳೂ ಕಣ್ಣೆದುರಿಗೆ ನಡೆದಂತೆ ಕಲ್ಪನೆ ಮಾಡಿಕೊಡುವಂತಹವುಗಳಾಗಿವೆ.

ಕನ್ನಡಿಗರಿಗೆ ನನ್ನ ಈ ರೂಪಕ ಸಂಕಲನ ಮೆಚ್ಚಿಕೆಯಾದರೆ ತುಂಬ ಸಂತೋಷಪಡುವೆನು. ಬೇರೆಯ ಲೇಖಕರು ಇವುಗಳಿಗಿಂತ ಒಳ್ಳೆಯವುಗಳನ್ನು ಬರೆದು ಪ್ರಕಟಿಸಿದರೆ, ಅದಕ್ಕಿಂತ ಹೆಚ್ಚಾಗಿ ಸಂತೋಷ ಪಡುವೆನು.

"ಜಯಂತಿ" ಕಾರ್ಯಾಲಯ
ಧಾರವಾಡ
೧೫–೮–೧೯೫೧

ಬೆಟಗೇರಿ ಕೃಷ್ಣಶರ್ಮ

# ಪ ರಿ ವಿ ಡಿ







# ಪಾತ್ರಗಳು

ನಿವೇದಕ (ನಾಟಕದ ಸೂತ್ರಧಾರ)

ಈಶಪ್ರಭು (ಬೆಳವಡಿಯ ದೊರೆ)

ಶಿವಪ್ಪನಾಯಕ (ಬೆಳವಡಿಯ ಸೇನಾಪತಿ)

ದೇವಣ್ಣ (ಗಡಿನಾಡಿನ ಬಂಟ)

ಶಿವಾಜಿ (ಮಹಾರಾಷ್ಟ್ರದ ರಾಜ್ಯಸಂಸ್ಥಾಪಕ)

ವೆಂಕೋಜಿ (ಶಿವಾಜಿಯ ಸೇನಾಪತಿ)

ಮಲ್ಲಮ್ಮ ರಾಣಿ (ಬೆಳವಡಿಯ ರಾಣಿ)

ಹೊನ್ನಮ್ಮ (ರಾಣಿಯ ದಾಸಿ)

ಅಲ್ಲದೆ ಸೇವಕರು, ಸೈನಿಕರು, ಗೊಲ್ಲರು, ಚಾರಣರು ಇತ್ಯಾದಿ

# ಬೆಳವಡಿಯ ಮಲ್ಲಮ್ಮ



## ಚಾರಣಗೀತ

(ಚಾರಣರ ಗುಂಪೊಂದು ಮೇಳವಾದ್ಯದೊಂದಿಗೆ ಹಾಡುವುದು.)

ಧನ್ಯೆ ಧನ್ಯೆ, ಮಲ್ಲಮ್ಮರಾಣಿ, ಬೆಳವಡಿಯ ಭಾಗ್ಯದೇವಿ !
ಧನ್ಯೆ, ಕನ್ನಡದ ಶಕ್ತಿಪತಾಕೆಯ ಎತ್ತಿ ಹಿಡಿದ ತಾಯಿ !

ಪತಿವ್ರತೆಯರೊಳು ಪಾರ್ವತಿಯು ನೀ, ಕ್ರೋಧದಲ್ಲಿ ಕಾಳಿ—
ಸಮರದಲ್ಲಿ ದುರ್ಗಾವತಾರಿ, ರತಿದೇವಿ ಚೆಲ್ವಿಕೆಯಲಿ... ॥ ೧ ॥

ಪ್ರಮೀಳೆಯೇ ಸರಿ ರಾಜ್ಯತಂತ್ರದಲಿ, ಗಾರ್ಗಿ ಜ್ಞಾನದಲ್ಲಿ—
ಕಲ್ಪಲತೆಗೆ ಸಮ ದಾನದಲ್ಲಿ, ಶಾರದೆಯು ಕಲೆಗಳಲ್ಲಿ... ॥ ೨ ॥

ನಿನ್ನ ವೀರಕಥೆ ಕನ್ನಡರಿಗೆ ಚೈತನ್ಯವೂಡುತಿಹುದೇ !
ನಿನ್ನ ಕೀರ್ತಿಪ್ರಭೆ ನಮ್ಮ ಮನಕೆ ಹೊಸ ಕಣ್ಣ ನೀಡುತಿಹುದೇ ! ॥ ೩ ॥

ಧನ್ಯೆ ಧನ್ಯೆ, ಮಲ್ಲಮ್ಮರಾಣಿ ಬೆಳವಡಿಯ ಭಾಗ್ಯದೇವೀ !
ಧನ್ಯೆ, ಕನ್ನಡದ ಶಕ್ತಿಪತಾಕೆಯ ಎತ್ತಿ ಹಿಡಿದ ತಾಯಿ !

## ೧

**ನಿವೇದಕ :**

ಕ್ರಿಸ್ತಶಕದ ಹದಿನೇಳನೆಯ ಶತಮಾನದ ಉತ್ತರಾರ್ಧದ ಪ್ರಾರಂಭ. ಆಗ ಉತ್ತರಕರ್ನಾಟಕದಲ್ಲಿ, ೩೬೦ ಹಳ್ಳಿಗಳನ್ನೊಳಗೊಂಡ ಬೆಳವಡಿಯ ನಾಡು, ಚಿಕ್ಕದೊಂದು ಸ್ವತಂತ್ರ ರಾಜ್ಯವಾಗಿ ಹೆಸರು ಪಡೆದಿತ್ತು. ಈ ನಾಡಿನ ದೊರೆ ಈಶ್ವರಪ್ರಭು. ಇತಿಹಾಸದಲ್ಲಿ ವೀರಸತಿಯೆಂದು ಕೀರ್ತಿಪಡೆದಿರುವ ಮಲ್ಲಮ್ಮರಾಣಿ, ಆತನ ಪಟ್ಟದರಸಿ. ಕ್ರಿ. ಶ. ೧೬೭೮ ನೆಯ ವರ್ಷದಲ್ಲಿ

ಒಂದು ಸಾಯಂಕಾಲ; ಅರಮನೆಯ ಕರುಮಾಡಿನಲ್ಲಿ ಕುಳಿತುಕೊಂಡು ಈಶಪ್ರಭು, ಮಲ್ಲಮ್ಮ ಮಾತನಾಡುತ್ತಲಿದ್ದಾರೆ.

* * * * * *

**ಈಶಪ್ರಭು.**–ಮಲ್ಲಾಜಿ, ನಿನ್ನ ಕಾಲಗುಣವೆನ್ನಬೇಕೋ, ಏನು ದೈವ-ಕೃಪೆಯೆಂದು ಭಾವಿಸಬೇಕೋ ? ನಮ್ಮ ಬೆಳವಡಿಯ ರಾಜ್ಯ ಚಿಕ್ಕದಾದರೂ ಸಂಪೂರ್ಣ ಸ್ವತಂತ್ರವಾಗಿದೆ. ಯಾವ ಸಾಮ್ರಾಜ್ಯದ ಆಧಿಪತ್ಯವೂ ನಮ್ಮ ಸ್ವಾತಂತ್ರ್ಯಕ್ಕೆ ಅಡ್ಡಿಪಡಿಸುವಂತಿಲ್ಲ.

**ಮಲ್ಲಮ್ಮ:**–ಪ್ರಭು, ವಿಜಯನಗರದ ಕನ್ನಡ ಸಾಮ್ರಾಜ್ಯ ಹಾಳಾದದ್ದೇ ತಡ ; ನಮ್ಮ ಎಲ್ಲ ಮಾಂಡಲಿಕ-ಮನ್ನೆಯರೂ ಪಾಳೆಯ-ಪಟ್ಟೆಗಾರರೂ ಸ್ವಾಭಿಮಾನಶೂನ್ಯರಾಗಿ, ಹೇಡಿಗಳಂತೆ ಅನ್ಯರ ಆಧಿಪತ್ಯವನ್ನು ಒಪ್ಪಿಕೊಂಡು ಬಿಟ್ಟರು. ಒಬ್ಬರಿಗೂ ದೇಶದ ಅಭಿಮಾನವಿಲ್ಲ; ಧರ್ಮದ ನಿಷ್ಠೆಯಿಲ್ಲ. ಕುಲಪರಂಪರೆಯ ಹೇವವಿಲ್ಲ; ಕುಟುಂಬದ ಗೌರವವಿಲ್ಲ ! ಶುದ್ಧ ರಣಹೇಡಿಗಳು ! ಕ್ಷತ್ರಿಯಕುಲದಲ್ಲಿ ಯಾತಕ್ಕೆ ಹುಟ್ಟಿ ಬಂದಿರುವರೋ ಏನೋ !

**ಈಶಪ್ರಭು:**–ಹೌದು, ನಿನ್ನ ಮಾತು ನಿಜ ರಾಣೀ ! ನಮ್ಮ ನಾಡಿಗೆ ಏನು ಕೇಡುಗಾಲ ಬಂದಿದೆಯೊ!.... ಈಗ ನಮ್ಮ ರಟ್ಟರಾಜ್ಯದ ಹಣೆಬರೆಹವನ್ನು ನೋಡುವುದಿಲ್ಲವೆ ? ಅಂದಿನ ನಮ್ಮ ಪೂರ್ವಜರು ರಟ್ಟ ಸಾಮ್ರಾಜ್ಯವನ್ನು ಕಟ್ಟಿ, ವಿಸ್ತಾರವಾಗಿ ಬೆಳಸಿ, ವೈಭವದಿಂದ ಆಳುತ್ತಿದ್ದರು. ಇಂದಿನ ನಮ್ಮ ಈ ಚಿಕ್ಕರಾಜ್ಯವನ್ನು ಲಕ್ಷ್ಯಿಸಿದರೆ, ಹಿಂದಿನ ರಟ್ಟ ಸಾಮ್ರಾಜ್ಯದ ಆನೆಯ ಮುಂದೆ.... ಇದೊಂದು ಇಲಿಯೆಂದು ಹೇಳಬಹುದು.

**ಮಲ್ಲಮ್ಮ:**–ನಿಜವಾದ ವೀರರೂ ಕ್ಷತ್ರಿಯೋಚಿತ ಮಹತ್ವಾಕಾಂಕ್ಷಿ-ಗಳೂ ಆದ ಅಂದಿನ ಹಿರಿಯರು, ಹೋರಾಡಿ ನೆತ್ತರು ಸುರಿಸಿ, ಸಾಮ್ರಾಜ್ಯ-ವನ್ನು ಕಟ್ಟಿದರು. ಸ್ವಾರ್ಥಿಗಳೂ ಭೋಗಲಾಲಸರೂ ಆಗಿ, ಅದೇ ವಂಶದ ಮುಂದಿನ ಸಂತಾನದವರು ಸಾಮ್ರಾಜ್ಯದ ಒಂದೊಂದೇ ಭಾಗವನ್ನು ಕಳೆದುಕೊಂಡರು. ರಟ್ಟ ಸಾಮ್ರಾಜ್ಯದ ಆನೆಯೆಲ್ಲ ಅಳಿದು ಹೋಗಿ, ನಮಗೆ ಈ ಬೆಳವಡಿ ರಾಜ್ಯದ ಬಾಲ ಮಾತ್ರ ಕೈಯಲ್ಲಿ ಉಳಿದಂತಾಗಿದೆ. ಎಲ್ಲಿ ಹೋಗಿದೆಯೋ ನಮ್ಮ ನಾಡಿನ ಸತ್ತ್ವ ! ಎಲ್ಲಿ ಹೋಗಿದೆಯೋ ನಮ್ಮ ನಾಡಿಗರ ಶಕ್ತಿ-ಸಂಪತ್ತು !

**ಈಶಪ್ರಭು:**–ಆದರೂ ಇದ್ದುದರಲ್ಲಿಯೆ ನಾವು ಭಾಗ್ಯಶಾಲಿಗಳೆಂದೇ ಹೇಳಬೇಕು ! ಇನ್ನೊಬ್ಬರ ಕೈಯ ಗೊಂಬೆಯಾಗಿ ಬಾಳದೆ, ಸ್ವಾತಂತ್ರ್ಯಸುಖ ಅನುಭವಿಸುತ್ತಲಿದ್ದೇವೆ !

**ಮಲ್ಲಮ್ಮ:**–ಇದೆಂಥಾ ಸ್ವಾತಂತ್ರ್ಯಸುಖವೋ ! ಮೈಗೆಲ್ಲ ವಿಷವು ಲೇಪಿತವಾಗಿ ಉರಿಯುತ್ತಿರುವಾಗ, ಹಣೆಗೆ ಶ್ರೀಗಂಧವದ ಬೊಟ್ಟನ್ನು ಇಟ್ಟು-ಕೊಂಡ ಹಾಗೆ ! ಕಾವೇರಿಯಿಂದ ಗೋದಾವರಿಯವರೆಗೆ ಅಖಂಡವಾಗಿದ್ದ ಕನ್ನಡನಾಡೆಲ್ಲ ಪರಕೀಯರ ಪಾಲು ಆಗಿರುವಾಗ, ನಮ್ಮ ಅಂಗೈಯಗಲದ ಬೆಳವಡಿ ರಾಜ್ಯದ ಸ್ವಾತಂತ್ರ್ಯಕ್ಕಾಗಿ ಸಮಾಧಾನ ಪಟ್ಟುಕೊಳ್ಳಬೇಕೇ ನಾವು? ಗಂಡುಸರೆನಿಸಿಕೊಳ್ಳುವ ನೀವೂ ಇಷ್ಟೊಂದು ಅಲ್ಪಸಂತುಷ್ಟರಾಗಬೇಕೆ ?

**ಈಶಪ್ರಭು:**–(ಮೆಲ್ಲಗೆ ನಕ್ಕು) ಮಲ್ಲಾಜೀ, ನೀನೊಂದು ವಿಚಿತ್ರವಾದ ಹೆಣ್ಣು ! ಆ ಮಲ್ಲಿಗೆ, ಮಾವು ಬೆಳೆಯುವ ಮಲೆನಾಡಿನಲ್ಲಿ ಹುಟ್ಟಿದ ಚೆಲುವೆ, ನೀನೂ ಒಂದು ಹೂವಿನ ಹಾಗೆಯೆ ಇರುವೆಯೆಂದು ನಾನು ಭಾವಿಸಿದ್ದೆ. ಆದರೆ ಕಣ್ಣಿಗೆ ಹೂವಿನಂತೆ ಕಾಣುವ ವಜ್ರಹೃದಯಿನಿ ನೀನು !

**ಮಲ್ಲಮ್ಮ:**–ಪ್ರಭು, ಮನುಷ್ಯನೆನಿಸಿಕೊಳ್ಳಬೇಕಾದವನು–ಗಂಡುಸಿ-ರಲಿ ಹೆಂಗುಸಿರಲಿ ! ಸಮಯ. ಸಂದರ್ಭದ ಔಚಿತ್ಯವನ್ನರಿತು, ಹೂವಿನಂತೆ ಮೆಲ್ಲಿತ್ತಾಗಿಯೂ ಇರಬೇಕು; ವಜ್ರದಂತೆ ಬಲ್ಲಿತ್ತಾಗಲೂ ಬರಬೇಕು ! ದಟ್ಟಿದರೆ ಸರಿಯಣ್ಣ....ಸರಿದರೆ ದಟ್ಟಣ್ಣ–ಹೀಗಿರುವವರು. ನಿಜವಾಗಿಯೂ ಮನುಷ್ಯರಲ್ಲ, ಪಶುಗಳು ! ನಮ್ಮ ಮಗು ನಾಗಭೂಷಣ, ನಿಜವಾದ ಮನುಷ್ಯ-ನಾಗಿ ಬಾಳಬೇಕೆಂದು ನನ್ನ ಆಶೆ. ಅವನು ಪುತ್ತೆ ಮರಳಿ, ಕನ್ನಡನಾಡನ್ನೆಲ್ಲ ರಟ್ಟ ಸಾಮ್ರಾಜ್ಯಧ್ವಜದ ಅಡಿಯಲ್ಲಿ ಒಂದುಗೂಡಿಸಿ ಮೆರೆಯಿಸಬೇಕೆಂದು ನನ್ನ ಅಕಾಂಕ್ಷೆ !

**ಈಶಪ್ರಭು:**–ಸರಿ ಸರಿ ! ನೀನು ನಿನ್ನ ಮಗುವಿಗೆ....ನಿತ್ಯದ ಹಾಲಿನೊಂದಿಗೆ, ನಿನ್ನ ಈ ಇಚ್ಛಾಶಕ್ತಿಯ ಗುಟುಕನ್ನೂ ಕೊಡುತ್ತೀಯೆಂದು ಕಾಣುತ್ತದೆ; ಆದ್ದರಿಂದಲೆ ವರ್ಷ ಕೂಡ ತುಂಬದ ಹಸುಗೂಸು, ಮರಿಯಾನೆಯಂತೆ ತುಂಬುಮೈಯವನಾಗಿ ಶೋಭಿಸುತ್ತಿದ್ದಾನೆ.

**ಮಲ್ಲಮ್ಮ:**–ವೀರಪತ್ನಿಗೆ ವೀರಮಾತೆಯಾಗಬೇಕಾದುದೂ ಕರ್ತವ್ಯ !

**ಈಶಪ್ರಭು**:–(ಗಟ್ಟಿಯಾಗಿ ನಕ್ಕು) ಸಂತೋಷ ! ಸಂತೋಷ! ನಿನ್ನಿಂದ ನನಗೆ ವೀರತನದ ಪ್ರಶಸ್ತಿಪತ್ರ ಸಿಕ್ಕಿತು !

**ಮಲ್ಲಮ್ಮ**:–( ಪ್ರಣಯಭಾವ ತೋರಿ ) ಅದು ಇಂದು ಹೊಸತಾಗಿ ಯೇನೂ ಸಿಕ್ಕಬೇಕಾಗಿಲ್ಲ. ಸೋದೆಯ ಮನೆತನದ ರಾಜಕನ್ಯೆ, ಹೇಡಿಯ ಕೈಯನ್ನು ಎಂದೂ ಹಿಡಿಯಲಾರಳು. ಸ್ವಯಂವರ ಕಾಲದಲ್ಲಿ, ಈ ನರಸಿಂಹನ ಶೌರ್ಯವನ್ನು ಮೆಚ್ಚಿ ಮನಸ್ಸು ಸೋತಾಗಲೇ ನಿಮಗೆ ವೀರತನದ ಪ್ರಶಸ್ತಿ-ಪತ್ರ ಸಿಕ್ಕಂತಾಗಿದೆ.

**ಈಶಪ್ರಭು**:–( ಉತ್ಸಾಹದ ನಗೆ ನಕ್ಕು, ವಿನೋದದ ಧ್ವನಿಯಲ್ಲಿ ) ಜಯ ವೀರ ಈಶ್ವರ ಪ್ರಭು ! ಜಯ ವೀರರಾಣಿ ಮಲ್ಲಾಂಬಿಕೆ !

(ಸೇವಕನೊಬ್ಬ ಬಂದು ಹೇಳುವನು.)

**ಸೇವಕ**:–ಗಡಿಗಾಪಿನ ಬಂಟ–ದೇವಣ್ಣ–ತಮ್ಮ ಅಪ್ಪಣೆಗಾಗಿ ದಾರೀ ಕಾಯತಾ ಇದ್ದಾನ ಬುದ್ಧಿ ! ಏನೋ ಒಂದು ಗುಟ್ಟಿನ ಸುದ್ದೀನ ತಿಳಿಸ ಬೇಕಾಗೇದಂತ ಪಾದದ ಹತ್ತರ.

**ಈಶಪ್ರಭು**:–ಹೋಗು, ಬೇಗನೇ ಅವನನ್ನು ಇಲ್ಲಿಗೆ ಕರೆದುಕೊಂಡು ಬಾ! (ಸೇವಕನು ಹೋಗುವನು) ದೇವಿ, ಮತ್ತಾವ ಮಹತ್ತ್ವದ ಸುದ್ದಿಯನ್ನು ತಂದಿದ್ದಾನೋ ದೇವಣ್ಣ !

**ಮಲ್ಲಮ್ಮ**:–ಆಗಲೇ ಹೇಳಿದೆನಲ್ಲಾ! ಮೈತುಂಬ ವಿಷ ಲೇಪಿತವಾಗಿರು ವಾಗ ಹಣೆಗೆ ಶ್ರೀಗಂಧದ ಬೊಟ್ಟು–ಎಂದು ! ಇಂದಿನ ಈ ಉರಿಗಾಲದಲ್ಲಿ, ನಾಡಿನೊಳಗೆ ನಿಶ್ಚಿಂತೆ–ಶಾಂತಿಗಳು ಎಲ್ಲಿಯವು........!

(ಗಡಿಗಾಪಿನ ಬಂಟ ದೇವಣ್ಣ ಬರುವನು)

**ದೇವಣ್ಣ**:–ದೇವರಿಗೆ ಶರಣುಶರಣಾರ್ಥಿ !

**ಈಶಪ್ರಭು**:–ಮತ್ತೇನಪ್ಪಾ ವಿಶೇಷ ಶಂಗತಿ....ದೇವಣ್ಣಾ !

**ದೇವಣ್ಣ**:–ಆ ಆರೇ ದೇಸದ ಶಿವಾಜಿ ಮಾರಾಜ, ಕರ್ನಾಟಕದೊಳಗ ಅಲ್ಲಲ್ಲೇ ದಾಳೀ ಮಾಡಿ, ದೇಸಾ ಗೆದ್ದು, ತಿರಿಗಿ ತನ್ನ ದೇಸಕ್ಕ ಹೊಂಟಾನಂತರಿ! ಇಲ್ಲೆ ನಮ್ಮ ಮೂಡಗಡೀ ದಾಟಿ, ಯಾದವಾಡದಾಗ ಬಂದು, ದಂಡು-ದಳಾ ಸಯಿತ ಬೀಡ ಬಿಟ್ಟಾನರೀ ಬುದ್ಧಿ !

**ಮಲ್ಲಮ್ಮ**:–ಏನು ?.... ಶಿವಾಜಿ ಮಹಾರಾಜ ?

**ಈಶಪ್ರಭು**:–ಏನು ? ಶಿವಾಜೀ ಮಹಾರಾಜ, ಯಾದವಾಡದಲ್ಲಿ ಬೀಡು ಬಿಟ್ಟಿದ್ದಾನೆ ?

**ದೇವಣ್ಣ**:–ಹೌದರಿ ಬುದ್ಧಿ !

**ಮಲ್ಲಮ್ಮ**:–ನಿಜವಾದ ಭಾರತವೀರ ಶಿವಾಜಿ ! ಶೂನ್ಯದಲ್ಲಿ ಸಾಮ್ರಾಜ್ಯ ಸ್ಥಾಪಿಸಿದ ವಿಭೂತಿಪುರುಷ ! ಎಂಟೆದೆಯ ಬಂಟ ! ಅಭಿಮಾನದ ಮೂರ್ತಿ ! ಮಹಾರಾಷ್ಟ್ರದ ಭಾಗ್ಯವಿಧಾತ !

**ಈಶಪ್ರಭು**:–ಬಲಿಷ್ಠ ಶತ್ರುವಿನೊಂದಿಗೂ, ವಿರೋಧ ಪರಿಸ್ಥಿತಿಯೊಂದಿಗೂ ಹೋರಾಡಿ, ಯಶಸ್ಸನ್ನು ಪಡೆದ ವಿಜಯುವೀರನಾತ! ಇನ್ನೊಂದು ಮಾತು ರಾಣೀ ! ಆತನ ಶತ್ರುವೆಂದರೆ ನಮ್ಮ ಶತ್ರು; ನಮ್ಮ ಶತ್ರುವೆಂದರೆ ಆತನ ಶತ್ರು !

**ಮಲ್ಲಮ್ಮ**:–ಹಾಗಾದರೆ, ಶಿವಾಜೀರಾಜ ನಮ್ಮ ಮಿತ್ರನೇ ಸರಿ ! ಆ ವೀರಶ್ರೇಷ್ಠನನ್ನು ನಮ್ಮ ರಾಜಧಾನಿಗೆ ಕರೆದು ಸ್ವಾಗತಿಸೋಣ ! ಆದರದ ಆತಿಥ್ಯ ಸಲ್ಲಿಸೋಣ ! ಆ ಸ್ವಾತಂತ್ರ್ಯವೀರನ ಸ್ನೇಹದೃಷ್ಟಿ, ನಮ್ಮ ಭೂಷಣ ಕುಮಾರನಿಗೆ ಪೌಷ್ಟಿಕವಾಗಿ ಪರಿಣಮಿಸೀತು ! ಆ ಸತ್ತ್ವಶಾಲಿಯ ಶುಭಾಶೀ-ರ್ವಾದ, ನಮ್ಮ ಬಾಲರಾಜನಿಗೆ ವೀರರಕ್ಷೆಯಾದೀತು !

**ಈಶಪ್ರಭು**:–ನಿನ್ನ ಮಾತು ನಿಜ ಮಲ್ಲಾಜೀ ! ಪವಾಡದಂತಹ ಆತನ ವೀರಕಾರ್ಯಗಳನ್ನು ಕೇಳಿ-ಕೇಳಿದಾಗಲೆಲ್ಲ, ಅವನನ್ನು ಕಂಡು ಸ್ನೇಹ ಬಳೆ-ಯಿಸಬೇಕೆಂಬ ಬಯಕೆ ನನ್ನಲ್ಲಿ ತಲೆದೋರುತ್ತಿತ್ತು ! ಆ ಬಲುದಿನದ ಬಯಕೆ ಪೂರ್ಣವಾಗುವ ಸುಯೋಗ ಇಂದು ತಾನಾಗಿಯೆ ಒದಗಿಬಂದಿದೆ. ಔತಣದ ರಾಯಸ ಬರೆಯಿಸಿ, ನಾಳೆಯ ದಿನವೇ ಹರಿಕಾರರನ್ನು ಆತನ ಕಡೆಗೆ ಕಳುಹುತ್ತೇನೆ !

**ಮಲ್ಲಮ್ಮ**:–ಆನಂದವು ಆನಂದವು ! ವೀರವಿಭೂತಿ ಮನೆಗೆ ಬರುವುದೆಂದರೆ–ಅದೇ ಮಾನವಮಿ; ಅದೇ ದೀವಳಿಗೆ ! ಸ್ವಾಗತ ಸಮಾರಂಭ, ಆ ಪುರುಷಸಿಂಹನಿಗೆ ತಕ್ಕ ರೀತಿಯಲ್ಲಿ ನಡೆಯಲಿ !

(ದೂರದಲ್ಲಿ ನಾಯಿಗಳ ಬೊಗಳಿಕೆ ಕೇಳುವುದು. ಸಮೀಪದ ಮರದಲ್ಲಿ ಕುಳಿತು ಹಾಲಕ್ಕಿಗಳು ಕಿಲಬಿಲಿಸುತ್ತಿರುವುವು. ನಾಗಭೂಷಣನು ಅಳುವ ಶಬ್ದ ಕೇಳುವುದು !)

**ಮಲ್ಲಮ್ಮ**:- ಇದೇನಿದು ? ಎಂದೂ ಇಲ್ಲದೆ ನಾಗಭೂಷಣ ಇಂದೇಕೆ ಅಳಲುತೊಡಗಿದ್ದಾನೆ ? ದೊರೆಗಳು ಈಗ ಮುಂದಿನ ರಾಜಕಾರ್ಯಕ್ಕೆ ತೆರಳ ಬಹುದು; ನಾನು ಕುಮಾರನನ್ನು ಸಮಾಧಾನಪಡಿಸಲು ಹೋಗುತ್ತೇನೆ.

## ೨

## ನಿವೇದಕ :

ಮರುದಿನ ಬೆಳಗಿನ ಎರಡು ಗಳಿಗೆ ಕಳೆದುವು ರಾಜಾಜ್ಞೆಯ ಡಂಗುರಕ್ಕೆ ಸರಿಯಾಗಿ ಬೆಳವಡಿಯ ನಗರದಲ್ಲಿ, ಶಿವಾಜೀರಾಜನ ಸ್ವಾಗತದ ಸಿದ್ಧತೆ ನಡೆದಿದೆ. ಬೀದಿ-ಬೀದಿಗೆ ಗುಡಿ-ತೋರಣಗಳನ್ನು ಕಟ್ಟುತ್ತಲಿದ್ದಾರೆ. ಕೋಟೆ-ಅರಮನೆಗಳ ಹೆಬ್ಬಾಗಿಲ ಮೇಲಿನ ನಗಾರ್‌ಖಾನೆಯಲ್ಲಿ, ಭೇರಿ-ದುಂದುಭಿಗಳ ಉತ್ಸಾಹವಾದನ ನಡೆದಿದೆ. ಊರ ಜನರೆಲ್ಲ ಶಿವಛತ್ರಪತಿಯನ್ನು ಕಾಣುವ ಕುತೂಹಲದಿಂದ ಕೂಡಿದವರಾಗಿ, ಎಲ್ಲ ಕೆಲಸ-ಕಾರ್ಯಗಳನ್ನು ಬಿಟ್ಟು, ಉಲ್ಲಾಸದಿಂದ ತಿರುಗುತ್ತ, ಅಲ್ಲಲ್ಲಿ ಗುಂಪುಗೂಡಿ ಮಾತನಾಡುತ್ತಲಿದ್ದಾರೆ. ಅರಮನೆಯ ಮೊಗಸಾಲೆಯ ಆಸನದಲ್ಲಿ ಈಶ್ವರಪ್ರಭು ಕುಳಿತಿದ್ದಾನೆ. ಬಳಿಯಲ್ಲಿ ನಿಂತುಕೊಂಡ ಸೇನಾಪತಿ ಶಿವಪ್ಪನಾಯಕ, ಬಿನ್ನಹಧ್ವನಿಯಲ್ಲಿ ಮಾತನಾಡುತ್ತಿದ್ದಾನೆ. ಅದೇನೆಂಬುದನ್ನು ಕೇಳಬೇಕಲ್ಲವೇ ನೀವು ?

* * * * * *

**ಶಿವಪ್ಪ**:–ಮಹಾರಾಜ, ಔತಣದ ರಾಯಸದೊಂದಿಗೆ ಬೆಳಗಿನಲ್ಲಿಯೆ ಹರಿಕಾರನನ್ನು ಕಳುಹಿ ಆಯಿತು. ನಮ್ಮ ಔತಣಕ್ಕೆ ಮನ್ನಣೆ ಕೊಡಬಹುದಲ್ಲವೇ ಶಿವಾಜಿ ಮಹಾರಾಜರು ?

**ಈಶಪ್ರಭು**:–ನಿಮಗೆ ಸಂಶಯವೇಕೆ ನಾಯಕರೇ ! ಶಿವಾಜಿಯು ವಿಜಾಪುರದ ಬಾದಶಹರ ಕಡುವೈರಿ ! ನಮ್ಮ ಬೆಳವಡಿಯ ವೀರಕುಲವೂ ವಿಜಾಪುರದ ಸೈನ್ಯವನ್ನು ಎದುರಿಸಿ ಹುಡಿಗೂಡಿಸಿದ ವರ್ತಮಾನ, ಶಿವಾಜಿಗೆ ಗೊತ್ತಿರಲೇ ಬೇಕು. ಚಿಕ್ಕದಾದರೂ ನಮ್ಮದೂ ಸ್ವತಂತ್ರ ಹಿಂದೂ ರಾಜ್ಯ !

ಶಿವಾಜಿಯ ಗುರಿಯೂ ಹಿಂದೂ ಸಾಮ್ರಾಜ್ಯವನ್ನು ಕಟ್ಟಿ ಬೆಳಸುವುದಿದೆ; ಹೀಗಿರುವಾಗ, ನಮ್ಮ ಪ್ರೀತಿಯ ಕರೆಯನ್ನು ಆತ ಮನ್ನಿಸದೆ ಇರುತ್ತಾನೆಯೆ?

**ಶಿವಪ್ಪ:**—ಮನ್ನಿಸಿದರೆ ಇಬ್ಬರಿಗೂ ಒಳ್ಳೆಯದೆ! ಜೆಂಕಿ-ಗಾಳಿಗಳಲ್ಲಿ ಸಹಕಾರ ಬೆಳೆದಂತಾಗುತ್ತದೆ. ಮಹಾರಾಷ್ಟ್ರವನ್ನು ಸಂಘಟಿಸುವ ಕಾರ್ಯದಲ್ಲಿ ಆತನಿಗೆ ನಮ್ಮಿಂದ ನೆರವು ದೊರೆತೀತು! ಕರ್ನಾಟಕವನ್ನು ಸಂಘಟಿಸಬೇಕೆಂಬ ಸನ್ನಿಧಿಯ ಆದರ್ಶದ ಸಿದ್ಧಿಗೆ, ಆವನಿಂದ ನಮಗೆ ನೆರವು ಸಿಕ್ಕಬಹುದು!

**ಈಶಪ್ರಭು:**—ಇದರ ಕಲ್ಪನೆ ಆ ಮಹಾಕಾರ್ಯಸಾಧಕನಿಗೆ ಇದ್ದೇ ಇದೆ; ಎಂದೇ ಆತ ನಮ್ಮ ಸ್ನೇಹದ ಆಮಂತ್ರಣವನ್ನು ಒಪ್ಪಿಕೊಳ್ಳುವುದರಲ್ಲಿ ಸಂಶಯಪಡುವ ಕಾರಣವೇ ಇಲ್ಲ! ಜೇಗನೆ ಆತನಿಂದ ಒಪ್ಪಿಗೆಯ ಸಂದೇಶ ಬಂದೇ ಬರುವುದು, ನೋಡುವಿರಂತೆ!

**ಶಿವಪ್ಪ:**—ಸರಿ, ಒಳ್ಳೆಯದೇ ಆಯಿತು. ನಾನಂತೂ ಆ ಛತ್ರಪತಿಯ ಅಂತಸ್ತಿಗೆ ತಕ್ಕಂತೆ ಸ್ವಾಗತದ ಸಿದ್ಧತೆಯನ್ನು ಮಾಡಲು ಎಲ್ಲರಿಗೂ ತಿಳಿಸಿ ಬಿಟ್ಟಿದ್ದೇನೆ.

(ಅರಮನೆಯ ಹೊರಬೀದಿಯಲ್ಲಿ ಜನರ ಗದ್ದಲ—ಗಲಾಟೆ ಕೇಳುವುದು. 'ತುರುಗಳ ಹಿಂಡು' 'ಕಳ್ಳರು' 'ಕಳ್ಳರಲ್ಲ ಶಿವಾಜಿಯ ಸೈನಿಕರು! 'ಇದೇನು ಬಂತಪ್ಪಾ ಶಿವಪೂಜೆಯೊಳಗ ಕರಡೀ ಓಡಾಟ!' ಎಂಬ ಮಾತುಗಳೂ ಕೇಳಬರುವುವು.)

**ಈಶಪ್ರಭು:**—ಇದೇನು ನಾಯಕರೇ? ಬೀದಿಯಲ್ಲಿ ಗದ್ದಲ ಏತರದು? ಜನರ ಕೂಗೇನೋ ಕೇಳಬರುತ್ತದಲ್ಲ!....

(ಸೇವಕನು ಆತುರದಿಂದ ಬರುವನು. ಬಂದವನೇ ಗಾಬರಿಯ ಧ್ವನಿಯಲ್ಲಿ ಹೇಳುವನು.)

**ಸೇವಕ:**—ಸನ್ನಿಧಿಗೆ ಅರಿಕೆಯಿರಬೇಕು. ನಮ್ಮ ತುರುಹಟ್ಟಿಯ ಹಿರಿಯ ಗೊಲ್ಲರು ಹೊರಗೆ ಬಂದು ನಿಂತಿದ್ದಾರೆ! ಶಿವಾಜಿಯ ಸೈನಿಕರು ಬಂದು, ನಮ್ಮ ಆಕಳ ಹಿಂಡನ್ನೆಲ್ಲಾ ಹೊಡೆದುಕೊಂಡು ಹೋಗಿದ್ದಾರಂತೆ!

**ಈಶಪ್ರಭು:**—ಇದೇನಿದು ವಿಪರೀತ ವರ್ತಮಾನ! ನೀನು ಹೋಗಿ ಆ ಗೊಲ್ಲರನ್ನು ಕರೆದುಕೊಂಡು ಬಾ! (ಸೇವಕನು ಹೋಗುವನು.) ಇದೇನಿದು ಶಿವಪ್ಪಾ! ನೀರಿಗಾಗಿ ಬಾವಿಯನ್ನು ತೆಗೆಯಲು ಹೋದರೆ, ಜೇತಾಳವೇ

ಬಾಯ್ಬಿರೆದು ನಿಂತಂತಾಯಿತಲ್ಲ! ಶಿವಾಜೀರಾಜನ ಸೈನ್ಯ ಈ ತಪ್ಪನ್ನು ಮಾಡಿರಲಾರದು....ಯಾಕೆಂದರೆ ಅವನು 'ಗೋಬ್ರಾಹ್ಮಣಪ್ರತಿಪಾಲಕ'ನೆಂದು ಬಿರುದನ್ನು ಹೊಗಳಿಸಿಕೊಳುತ್ತಿರುತ್ತಾನೆ.

(ಗೊಲ್ಲರು ಬರುವರು.)

**ಗೊಲ್ಲರು**:–ದೇವರಿಗೆ ಶರಣಾರ್ತಿ!

**ಶಿವಪ್ಪ**:–ಏನಪ್ಪಾ, ಮತ್ತೇನು ಸುದ್ದೀ ತಂದಿದ್ದೀರಿ?

**ಒಬ್ಬ ಗೊಲ್ಲ**:–ಬುದ್ಧೀ! ಒಳ್ಳೇ ಸುದ್ದೀ ತರೂ ದೈವ ನಮಗಿಲ್ಲರಿ ಇಂದ! ಶಿವಾಜಿಯ ದಂಡು ಬಂದು, ಯಾದವಾಡದಾಗ ಪಾಳೇ ಬಿಟ್ಟೈತಂತರಿ! ದಂಡಿನ ಜನಕ್ಕೆಲ್ಲಾ ಹಾಲು ಬೇಕಂತ ಹೇಳಿ, ನಿನ್ನೇ ರಾತ್ರೀ ಹತ್ತಿಪ್ಪತ್ತು ಮಂದಿ ಬಂದು ಕೇಳಿದರ್ರಿ! ಎಲ್ಲಾ ಹಾಲನ್ನೂ ಇಂದ ಇಲ್ಲಿಗೇ ಕಳಸೂದಕ, ನಮಗ ನಿನ್ನೆ ರಾತ್ರಿನs ಅಪ್ಪಣಿ ಆದ್ದರಿಂದ, ನಾವು ಅವರಿಗೆ ಹಾಲು ಕೊಡಲಿಲ್ಲರಿ. ಅವರು ನಮ್ಮನ್ನ ಬೆದರಸಾಕ ಬಂದರ್ರಿ! ನಾವೂ ಎಲ್ಲರೂ ಒಟ್ಟು ಗೂಡಿ ಗಟ್ಟ್ಯಾಗಿ ನಿಂತೀವರಿ! ಆಗ ಅವರು ಸುಮಾಕs ಹ್ವಾದರು. ಮುಂದ ಬೆಳಗಿನ ಕೋಳಿ ಕೂಗು ಯಾಳೇ ನೋಡರಿ! ಆಗ ನೂರಾರು ಜನಾ ಕತ್ತೀ ಕಟಾರೀ ತೊಗೊಂಡು, ಗುಂಪು ಗೂಡಿ ಬಂದು, ನಮ್ಮನ್ನ ಹೊಡದು ಬಡದು ಹೆದರಿಸಿ, ಆಕಳ ಹಿಂಡ್ನೆಲ್ಲಾ ಹೊಡಕೊಂಡು ಹೋಗ್ಯಾರ್ರಿ ಬುದ್ಧಿ! ಜಗಳಾಟದಾಗ, ನಮ್ಮ ಹನಮಂತ ಅರಜೀವಾಗಿ ಬಿದ್ದಾನ್ರಿ! ಮತ್ತ ಗೋವಿಂದ ಮಾವ್ರೀ, ಅವಂದೊಂದು ಕಾಲs ಕಡದು ಹೋಗೆಯ್ತರಿ! ಅವರನ್ನ ಅಲ್ಲೇ ಬಿಟ್ಟು, ನಾನು ಈತ, ಇಬ್ಬರೂ ಓಡತೋಡತs, ಪಾದಕ್ಕ ಅರಿಕೀ ಮಾಡಿಕೊಳ್ಳಾಕ ಬಂದೀವರಿ!

( ಹೊರಗೆ ಜನರ ಮಾತಿನ ಗದ್ದಲ ಕೇಳುತ್ತಲೇ ಇರುವುದು.)

**ಈಶಪ್ರಭು**:– ಶಿವಪ್ಪಾ, ನಾವು ಪಾಂಡವರೆಂದು ಯಾರನ್ನು ತಿಳಿದಿದ್ದೆವೋ, ಅವರೇ ಕೌರವರಾಗಿ ಬಿಟ್ಟರಲ್ಲ? ಸರಿ! ಕನಸಿನಲ್ಲಿ ಮನಸಿನಲ್ಲಿ ಇಲ್ಲದೆ, ಕಾಳೆಗದ ಸಂದರ್ಭ ಒದಗಿಬಂದಿತು. ಆಕಳ ಹಿಂಡನ್ನು ಹೊಡೆದುಕೊಂಡು ಹೋಗುವುದೆಂದರೆ, ನಮಗೆ ಯುದ್ಧಕ್ಕೆ ಆಹ್ವಾನ ಕೊಟ್ಟಂತೆಯೇ ಸರಿ! ಆಕಳ ಹಿಂಡನ್ನು ಮರಳಿ ತಾರದೆ ಇಂದು ನಾನು ಬಾಯಲ್ಲಿ ನೀರು-

ಹಾಕುವಂತಿಲ್ಲ. ತುರುಗಾಳೆಗ ಕನ್ನಡಕ್ಷತ್ರಿಯರ ಕರ್ತವ್ಯಗಳಲ್ಲೊಂದು ! ನಾನು ಈಗಲೆ ಹೊರಡಪೇಕು. ಸೈನ್ಯಸಿದ್ಧತೆಯ ಸಂಕೇತಭೇರಿಯನ್ನು ಹೊಡೆಯಿಸಲು ಅಪ್ಪಣೆ ಮಾಡಿರಿ !

**ಶಿವಪ್ಪ**:–ಈ ಚಿಕ್ಕ ಕೆಲಸಕ್ಕೆ ತಾವೇಕೆ ಹೋಗಬೇಕು ? ಸನ್ನಿಧಿಯ ಸೇವಕನಿದ್ದಾನೆ. ಬೆಳವಡಿ ನಾಡಿನ ಬಂಟರ ಪಡೆಯಿದೆ. ನಾನು ಈಗಲೇ ಹೋಗಿ, ಆಕಳನ್ನು ಬಿಡಿಸಿಕೊಂಡು ಬರುತ್ತೇನೆ. ಆ ಕೊಂಕಣದ ನರಿಗಳಿಗೆ, ನಮ್ಮ ಕನ್ನಡ ಸಿಂಹಗಳ ಪಂಜರದ ಹದನು ಇನ್ನೂ ಗೊತ್ತಾಗಿಲ್ಲವೆಂದು ತೋರುತ್ತದೆ.

**ಈಶಪ್ರಭು**:–ನಾನೇನು ಮಾಡಬೇಕೆಂದಿದ್ದೆ ; ಅದೇನು ಒದಗಿ ಬಂತು ನೋಡಿ ! ದೈವದ ಆಟವೆನ್ನುವುದು ಇಂತಹದಕ್ಕೆ ! ಆಯಿತಲ್ಲ ! ಬಂದದ್ದಕ್ಕೆ ಎದೆಯನ್ನಂತೂ ಕೊಡಲೇ ಬೇಕು ಈ ಬೆಳವಡಿ ನಾಡಿನ ಬಂಟರು ಉತ್ತರ-ಕುಮಾರರಲ್ಲವೆಂಬುದನ್ನು, ಆ ಗೋಗ್ರಹಣದ ಕೌರವಸೈನ್ಯಕ್ಕೆ ತೋರಿಸಬೇಕಾಗಿದೆ. ನಾನೂ ಹೊರಡುವೆ ಯುದ್ಧಕ್ಕೆ. ನನ್ನ ಕರ್ತವ್ಯವನ್ನು ನಾನು ಮಾಡಲೇ ಬೇಕು !

**ಶಿವಪ್ಪ**:–ನಮ್ಮ ಕರ್ತವ್ಯವನ್ನು ನಾವೂ ಮಾಡಬೇಕು. ತಾವೀಗ ಹೊರಡುವ ಕಾರಣವಿಲ್ಲ. ಸಾಯಂಕಾಲದೊಳಗಾಗಿ ನಮ್ಮ ಆಕಳಹಿಂಡು ನಮ್ಮ ತುರುಹಟ್ಟಿಗೆ ಮರಳದೆ ಹೋದರೆ, ನಾವೆಲ್ಲ ಏತಕ್ಕೆ ಬದುಕಿರಬೇಕು ? ತಾವು ನಿಶ್ಚಿಂತೆಯಿಂದ ಇರಬೇಕು. ನಾನೀಗ ಹೊರಟೇ ಬಿಡುತ್ತೇನೆ.

(ಸೈನ್ಯಸಿದ್ಧತೆಯ ಭೇರಿ-ದುಂದುಭಿ ಮೊಳಗುವುವು. ಕಹಳೆ-ತುತೂರಿಗಳ ಕೂಗು ಕೇಳುವುವು. "ಜಯ ವೀರಭದ್ರ !" ಎಂಬ ಜಯಜಯಕಾರದ ಧ್ವನಿಯಾಗುವುದು.)

೩

**ನಿವೇದಕ :**

ಅಂದೆಯೆ ಸಾಯಂಕಾಲ, ಯಾದವಾಡದಲ್ಲಿ ಬಿಟ್ಟ ಶಿವಾಜಿಯ ಬೀಡಿನಲ್ಲಿ, ಸೋಲಿನ ಔದಾಸೀನ್ಯ ಮುಸುಕಿದೆ. ಬೆಳವಡಿಯ ಭಟರ ಸೇನೆ, ಶಿವಾಜಿಯ ಚಿಕ್ಕ ಸೈನ್ಯದ ಮೇಲೆ ಬಿದ್ದು, ಹೋರಾಡಿ ಗೆದ್ದು, ತಮ್ಮ ಆಕಳ ಹಿಂಡನ್ನು

ಬಿಡಿಸಿಕೊಂಡು ಹೋಗಿದೆ. ನಡೆದ ಮಿಂಚಿನ ಯುದ್ಧದಲ್ಲಿ ಕೆಲವು ಸೈನಿಕರು ಸತ್ತಿದ್ದಾರೆ; ಹಲವರು ಗಾಯಗೊಂಡು ನರಳುತ್ತ ಬಿದ್ದಿದ್ದಾರೆ. ಈಗ ಶಿವಾಜೀ ಮಹಾರಾಜ, ತನ್ನ ಗೂಡಾರದಲ್ಲಿ ಕುಳಿತು, ಸೇನಾಪತಿಯಾದ ವೆಂಕೋಜಿಯೊಂದಿಗೆ ಏನೋ ಮಾತನಾಡುತ್ತಲಿದ್ದಾನೆ; ಕೇಳಿ !

* * * * * *

**ಶಿವಾಜಿ:**–ನಾನು ಬೆಳಗಿನಲ್ಲಿ ಲೊಕೂರ ದೇವಿಯ ದರ್ಶನಕ್ಕೆ ಹೊರಟಿನಲ್ಲವೆ ? ಎಂದೂ ಕಾಣದ ಅಪಶಕುನಗಳನ್ನು ಇಂದು ಕಂಡೆ ಅಲ್ಲಿ ದೇವಿಯ ದರ್ಶನ ಒದಗಿದರೂ, ಮನಸ್ಸು ಏಕೋ ಅಸಮಾಧಾನದಿಂದ ಕುದಿಯುತ್ತ-ಲಿದ್ದಿತು. ದೇವಿ ಕೊಟ್ಟ ದೃಷ್ಟಾಂತವೂ ಅನುಕೂಲವಾಗಿ ಕಾಣಲಿಲ್ಲ. ಮರಳಿ ಬರುವುದರಲ್ಲಿಯೆ ಇಲ್ಲಿ ಇಂಥ ಅನರ್ಥ ಒದಗಿಬಿಟ್ಟಿದೆ.

**ವೆಂಕೋಜಿ:**–ನಮ್ಮ ಇಡಿಯ ದಕ್ಷಿಣ ದಿಗ್ವಿಜಯದಲ್ಲಿ, ಇಂತಹ ಅನರ್ಥದ ಸಂದರ್ಭ ಎಲ್ಲಿಯೂ ಒದಗಿರಲಿಲ್ಲ. ಎಲ್ಲ ಕಡೆಗೂ ನಮ್ಮ ಸೈನಿಕರ ಕೈಯೇ ಮೇಲು ! ನಮ್ಮ ಹೆಸರನ್ನು ಕೇಳಿದ ಕೂಡಲೆ, ಅಲ್ಲಲ್ಲಿಯ ಜನರೆಲ್ಲ ನಮಗೆ ಅನುಕೂಲತೆಗಳನ್ನು ಒದಗಿಸುತ್ತಿದ್ದರು.

**ಶಿವಾಜಿ:**–ಇಲ್ಲಿಯೂ ನಮಗೆ ಯಾವ ತೊಂದರೆಯೂ ಆಗುತ್ತಿರಲಿಲ್ಲ. ನಮ್ಮ ಸೈನಿಕರು ದುಡುಕಿ ತಪ್ಪು ಮಾಡಿದರು. ಒಂದು ರಾಜ್ಯದ ಆಕಳ ಹಿಂಡನ್ನು ಹೊಡೆದುಕೊಂಡು ಬರುವುದೆಂದರೆ, ಯುದ್ಧಕ್ಕೆ ಆಹ್ವಾನ ಕೊಟ್ಟಂತೆಯೇ ಅಲ್ಲವೇನು ?

**ವೆಂಕೋಜಿ:**–ಅದೇನೋ; ಮಾತು ಮಿಂಚಿ ಹೋಗಿದೆ ! ಆದರೆ ಇಂದಿನ ಸೋಲು ಚಿಕ್ಕದಾದರೂ, ಇದುವರೆಗೆ ನಾವು ಸಂಪಾದಿಸಿದ ದಿಗ್ವಿಜ-ಯದ ಕೀರ್ತಿಗೆ ಕಲಂಕವನ್ನು ತೊಡೆದಂತೆಯೇ ಸರಿ ! ಈ ಕಲಂಕದೊಂದಿಗೆ ನಮ್ಮ ದೇಶಕ್ಕೆ ನಾವು ಮರಳಬೇಕೆ ?

**ಶಿವಾಜಿ:**–ಹಾಗಾದರೆ ಏನು ಮಾಡಬೇಕೆನ್ನುತ್ತೀರಿ ವೆಂಕೋಜಿ ?

**ವೆಂಕೋಜಿ:**–ನಾನೇನು ಹೇಳಲಿ ? ಸನ್ನಿಧಿಯ ಚಿತ್ತ ! ಆದರೆ ಒಂದು ಮಾತನ್ನು ಹೇಳಬೇಕೆನಿಸುತ್ತದೆ. ಈ ನಮ್ಮ ಸೋಲಿನ ವರ್ತಮಾನ, ಮಿಕ್ಕ

ಕಡೆಗೆಲ್ಲ ತಿಳಿದರೆ. ನಮ್ಮ ಸೈನ್ಯದ ಅಸಮರ್ಥತೆಯ ಕಲ್ಪನೆ ದೇಶದಲ್ಲೆಲ್ಲ ಹಬ್ಬಿ ಹರಡಬಹುದು. ಹೀಗೆ ಆಗುವುದು, ಹೊಸತಾಗಿಯೇ ಕಟ್ಟಿದ ಮಹಾರಾಷ್ಟ್ರ ಸಾಮ್ರಾಜ್ಯಕ್ಕೆ ಪಥ್ಯಕರವೆನಿಸದು ದೊಡ್ಡ ದೊಡ್ಡ ಮದ್ದಾನೆ-ಗಳನ್ನು ಸದೆಬಡೆದವರು ನಾವು; ಇಲ್ಲಿ ಬಂದು, ಒಂದು ಬಡಕಲು ಬಸವನಿಗೆ ಹೆದರಿದಂತೆ ಆಗುವುದಿಲ್ಲವೆ ?

**ಶಿವಾಜಿ:-** ನಿಮ್ಮ ಮಾತು ನಿಜ ವೆಂಕೋಜಿ ! ನಮ್ಮ ಅಸಮರ್ಥತೆಯ ಕಲ್ಪನೆಗೆ ಆಸ್ಪದವಾಗುವುದು ಒಳ್ಳೇಯದಲ್ಲ. ನಮ್ಮ ಹಿಂಗಾಪಿನ ಸೈನ್ಯ ಇಂದಿನ ಇರುಳೇ ಇಲ್ಲಿಗೆ ಬಂದು ತಲ್ಪುತ್ತದೆ. ನಾಳೆಯ ದಿನವೇ ಬೆಳವಡಿಯ ಕೋಟೆಗೆ ಮುತ್ತಿಗೆ ಬೀಳಲಿ ! ಮರಾಠಾವೀರಸಿಂಹಗಳ ಶಕ್ತಿ ಎಂತಹದಿದೆ ಎಂಬುದನ್ನು, ಇಲ್ಲಿಯವರಿಗೂ ತೋರಿಸಿಯೇ ಹೋಗೋಣ. ಬೆಳವಡಿಯ ವಿಜಯವನ್ನೂ ಉಡಿಯಲ್ಲಿ ಕಟ್ಟಿಕೊಂಡೇ ನಮ್ಮ ದೇಶಕ್ಕೆ ಮರಳುವುದು ಹಿತಕರವೆಂದು ನನಗೂ ಎನಿಸುತ್ತಲಿದೆ.

**ವೆಂಕೋಜಿ:–** ದೊರೆಗಳದು ಸಮಂಜಸವಾದ ವಿಚಾರ. ಸೈನ್ಯಕ್ಕೆ ಸೋಲಿನ ಚಟ ಹಚ್ಚುವುದು ತುಂಬ ಹಾನಿಕರವಾದದ್ದು.

**ಶಿವಾಜಿ–:** ಆಗಲಿ ವೆಂಕೋಜಿ! ಈಗ ಸತ್ತ ಸೈನಿಕರ ಮುಂದಿನ ವ್ಯವಸ್ಥೆಯಾಗಲಿ. ಗಾಯಾಳುಗಳಿಗೆಲ್ಲ ಒಳ್ಳೆಯ ರೀತಿಯಿಂದ ಉಪಚಾರ ನಡೆಯಲಿ. (ಸ್ವಲ್ಪ ತಡೆದು) ಸದ್ಯ ದಿಗ್ವಿಜಯದ ಯುದ್ಧನಿಲ್ಲಿಸಿ, ಸೈನಿಕರಿಗೆ ವಿಶ್ರಾಂತಿಯನ್ನು ಕೊಡಬೇಕೆಂದು ಮಾಡಿದ್ದೇವು. ಈಗ ಇದ್ದುದಿದ್ದ ಹಾಗೆ ನಾವಾಗಿಯೇ ಯುದ್ಧ ಹೂಡಬೇಕಾಗಿ ಬಂತು. ಶ್ರೀಭವಾನಿಯ ಇಚ್ಛೆ! ಅವಳ ಕೈಯಲ್ಲಿಯ ಗೊಂಬೆಗಳು ನಾವು! ದಿಗ್ವಿಜಯದ ಪರಿಪೂರ್ಣತೆಯೇ ಆ ತಾಯಿಯ ಸಂಕಲ್ಪವಾಗಿರಬಹುದು. ಆಗಲಿ, ನೀವು ಮುಂದಿನ ಸಿದ್ಧತೆಗೆ ತೊಡಗಿರಿ. ಬೆಳಗಿನ ಜಾವದಲ್ಲಿಯೇ ನಮ್ಮ ಸೈನ್ಯ ಬೆಳವಡಿಯತ್ತ ಕೂಚು ಮಾಡಲಿ !

**ವೆಂಕೋಜಿ :–** ಮಹಾರಾಜರ ಆಜ್ಞೆ ! ರಾಮ್ ರಾಮ್ !

❦

**ನಿವೇದಕ :**

ಮರುದಿನ ಮುಂಜಾವದಲ್ಲಿಯೇ ಶಿವಾಜಿಯ ಸೈನ್ಯ ಬೆಳವಡಿಯತ್ತ ಹೊರಟಿತು. ಬೇಹುಗಾರರಿಂದ ಬೆಳವಡಿಯವರಿಗೆ ಸೈನ್ಯಚಲನದ

ವರ್ತಮಾನ ಬಂದಿತು. ಆದರೆ ಹೊರಬಿದ್ದು ಯುದ್ಧ ಮಾಡುವಷ್ಟು ಸೈನ್ಯ-ಸಂಖ್ಯೆ ರಾಜಧಾನಿಯಲ್ಲಿರಲಿಲ್ಲ. ಹೊರಗಿನ ಸೈನ್ಯವನ್ನು ಕರೆಯಿಸಿಕೊಳ್ಳುವಷ್ಟು ವೇಳೆಯ ಅವಕಾಶವೂ ಇರಲಿಲ್ಲ. ಆದುದರಿಂದ ಈಶಪ್ರಭುವು ಕೋಟೆಯೊಳಗಿದ್ದುಕೊಂಡೇ ಯುದ್ಧಮಾಡುವುದನ್ನು ನಿಶ್ಚಯಿಸಿ ಡಂಗುರ ಸಾರಿಸಿದ. ಕೋಟೆಯ ಬಾಗಿಲುಗಳು ಭದ್ರವಾಗಿ ಮುಚ್ಚಿದುವು. ಗುಪ್ತದ್ವಾರಗಳಿಗೆ ನಂಬಿಗೆಯ ಕಾಪಿನಾಳುಗಳು ನಿಂತರು. ಕೋಟೆಯ ಮೇಲೆ ಯುದ್ಧಸಲಕರಣೆಗಳನ್ನು ಸಜ್ಜುಗೊಳಿಸಿಕೊಂಡು, ಕನ್ನಡ ಬಂಟರು ಯುದ್ಧಸನ್ನದ್ಧರಾಗಿ ನಿಂತರು. ಶಿವಾಜಿಯ ಸೈನ್ಯ ಬಂದು ಕೋಟೆಯನ್ನು ಮುತ್ತಿ ಬಳಸಿನಿಂತಿತು.

( ಸೈನಿಕರ ಕೋಲಾಹಲ, ರಣವಾದ್ಯಗಳ ಮೊರೆತ, ಕೋಟೆಯನ್ನು ಕೆಡುಹಲು ಪ್ರಯತ್ನಿಸುವ ಹಾರೆ–ಗುದ್ದಲಿಗಳ ಸಪ್ಪುಳ )

ಬೆಳವಡಿಯ ದುರ್ಗ ದುರ್ಭೇದ್ಯವಾದುದು. ಕೋಟೆಯನ್ನು ಕೆಡಹುವ–ಬಾಗಿಲನ್ನು ಮುರಿಯುವ–ವೈರಿಸೈನ್ಯದ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಬೆಳವಡಿಯ ವೀರಯೋಧರು ಕೋಟೆಯ ಮೇಲೆ ನಿಂತುಕೊಂಡು, ವೈರಿಸೈನ್ಯದ ಮೇಲೆ ಬಂಡೆಗಲ್ಲುಗಳನ್ನು ಎತ್ತಿ ಎತ್ತಿ ಉರುಳಿಸುತ್ತಿದ್ದಾರೆ. ತೊಲೆ-ಮುಂಡಿಗೆಗಳಿಗೆ ಬೆಂಕಿ ಹಚ್ಚಿ ಹಚ್ಚಿ, ಕೆಳಗೆ ಚೆಲ್ಲುತ್ತಿದ್ದಾರೆ. ಕುದಿಯುವ ಸುಣ್ಣವನ್ನೂ ಕಾಸಿದ ಅಂಬಲಿಯನ್ನೂ ಸುರಿಯುತ್ತಿದ್ದಾರೆ. ಕಾದ ಉಸುಕನ್ನು ಸಲಿಕೆಗಳಿಂದ ಉಗ್ಗುತ್ತಿದ್ದಾರೆ. ಭೀಕರವಾದ ಕೋಟೆಗಾಳೆಗ !

(' ಅಯ್ಯೋ ಉರಿ !' 'ಅಯ್ಯೋ ಸಾವು' 'ಜಯ್ ತುಳಜಾಭವಾನೀ' 'ಶಿವಾಜಿ ಮಹಾರಾಜಕೀ ಜಯ್ ' ಇವೆಲ್ಲ ಕೂಗುಗಳು ಸೈನಿಕರ ಕೋಲಾಹಲದೊಂದಿಗೆ ಕೇಳು-ತ್ತಿರುವುವು.)

ಘೋರವಾದ ಯುದ್ಧ ! ಮರಾಠಾ ಸೈನಿಕರಿಗೆ ಎಂದೂ ಮರೆಯದಂತಹ ಏಟು ! ಒಂದು ದಿನವಾಯಿತು....! ಎರಡು ದಿನಗಳಾದುವು....ಎಂಟು ದಿನ ಕಳೆದುವು ! ಹತ್ತು-ಹದಿನೈದು-ಇಪ್ಪತ್ತು ದಿನಗಳಾದುವು. ಇಪ್ಪತ್ತಾರು ದಿನಗಳ ವರೆಗೂ ಯುದ್ಧ ನಡೆದೇ ಇದ್ದಿತು. ಶಿವಾಜಿ ಬೆರಗಾಗಿ ಬೆರಳು ಕಚ್ಚಿದ. ಮರಾಠಾ ವೀರರ ಗುಂಡಿಗೆ ಬೆದರಿ ದಡದಡಿಸಿತು.

ಇಪ್ಪತ್ತ್ರೇಳನೆಯ ದಿನ ಬೆಳಗಾಯಿತು. ಬೆಳವಡಿಯ ಅರಮನೆಯ ರಾಣೀವಾಸದಲ್ಲಿ, ಈಶಪ್ರಭುವು ಮಲ್ಲಮ್ಮರಾಣಿಯೊಂದಿಗೆ ಮಾತನಾಡುತ್ತ ನಿಂತುಕೊಂಡಿದ್ದಾನೆ :

**ಈಶಪ್ರಭು**:–ದೇವಿ ! ಇದುವರೆಗಂತೂ ಗಟ್ಟಿಮುಟ್ಟಾಗಿ ನಿಂತು, ವೈರಿಗಳನ್ನು ಎದುರಿಸಿ ಆಯಿತು. ನಮ್ಮ ಕನ್ನಡ ವೀರರ ಧೈರ್ಯ-ಶೌರ್ಯಗಳು ಎಳ್ಳಷ್ಟೂ ಕಡಿಮೆಯಾಗಿಲ್ಲ. ದಿನದಿನಕ್ಕೂ ಅವರ ಉತ್ಸಾಹ ಹೆಚ್ಚುತ್ತಲಿದೆ. ಆದರೆ ನಮ್ಮ ದುರ್ದೈವ ಮಲ್ಲಾಜಿ ! ಕೋಟೆಯೊಳಗಿನ ಅನ್ನದ ಸಂಗ್ರಹವೆಲ್ಲ ತೀರಿಹೋಗಿದೆ. ಮದ್ದು-ಗುಂಡುಗಳೂ ಸವೆದಂತಾಗಿವೆ. ಕುಡಿಯುವ ನೀರು ಕೂಡ ಸಾಕಷ್ಟು ಸಿಕ್ಕದಂತಾಗಿದೆ. ಮುಂದೆ ಗತಿಯೇನು ?

**ಮಲ್ಲಮ್ಮ**:–ಹೂಲಿಯ ಗವಿಯಪ್ಪ ನಾಯಕರೂ ಸೀಗೆಹಳ್ಳಿಯ ವೀರಪ್ಪಗೌಡರೂ ಇದುವರೆಗೆ ಬರಲಿಲ್ಲವಲ್ಲ ! ಅವರು ತಂತಮ್ಮ ಸೈನ್ಯ-ಗಳೊಂದಿಗೆ ಬಂದು ಹೊರಗಿನಿಂದ ಮೇಲೆ ಎರಗಿದ್ದರೆ, ಶಿವಾಜಿಯ ಸೈನ್ಯದ ಸಮಾಧಿ ಬೆಳವಡಿಯ ಸ್ಮಶಾನದಲ್ಲಿಯೇ ಆಗುತ್ತಿತ್ತು !

**ಈಶಪ್ರಭು**:–ಇದುವರೆಗೆ ದಾರಿ ನೋಡಿದರೂ ಅವರಿಬ್ಬರೂ ನೆರವಿಗೆ ಬರಲಿಲ್ಲ. ಏಕೆ ಬರಲಿಲ್ಲವೆಂಬುದೂ ತಿಳಿಯುವಂತಿಲ್ಲ. ಹಸಿವೆ-ನೀರಡಿಕೆಗಳನ್ನು ತಾಳಿಕೊಂಡು, ನಮ್ಮ ಸೈನಿಕರು ಇನ್ನೆಷ್ಟುದಿನ ಯುದ್ಧಸಾಗಿಸಬಲ್ಲರು ?

**ಮಲ್ಲಮ್ಮ**:–ಪ್ರಭು, ನಾವು ಕನ್ನಡ ಕ್ಷತ್ರಿಯರು ! ದೊರೆತರೆ ಗೆಲವು; ಇಲ್ಲದಿದ್ದರೆ ಸಾವು ! ಗೆದ್ದರೆ ಜಯದ ಸುಖ ; ಸತ್ತರೆ ಸ್ವರ್ಗಸುಖ ! ಈಗ ಮುಂದೆ ಗತಿಯೇನೆಂದು ಬೆದರಿ ಕುಳಿತು ಉಪಯೋಗವಿಲ್ಲ. ನಮ್ಮ ನಾಡಿಗರ ಪೌರುಷದ ಕೊನೆಯ ಪರೀಕ್ಷೆಯಾಗಿಬಿಡಲಿ ! ಕೋಟೆಯ ಬಾಗಿಲನ್ನು ತೆರೆಯಿಸಿರಿ. ಇದ್ದಷ್ಟು ಸೈನ್ಯದೊಂದಿಗೆ ಹೊರಬಿದ್ದು ವೈರಿಸೈನ್ಯದ ಮೇಲೆ ಬಿದ್ದು, ಕೈ ಕೈ ಕಾಳಗವನ್ನು ಆರಂಭಿಸಿರಿ !

**ಈಶಪ್ರಭು**:–ಇದರ ಹೊರತು ಬೇರೆ ಗತಿಯೇ ಇಲ್ಲವೆಂದು ಕಾಣುತ್ತದೆ.

**ಮಲ್ಲಮ್ಮ**:–ಈಗ ಇನ್ನೊಂದು ಯೋಚನೆಯೇ ಬೇಡ ! ನಾನೂ ನನ್ನ ಚಾಮುಂಡೀ ತಂಡವನ್ನು ಕೂಡಿಸಿ, ಯುದ್ಧಕ್ಕೆ ಹೊರಡುತ್ತೇನೆ.

(ದಾಸಿಯು ಬಂದು ಹೇಳುವಳು)

**ದಾಸಿ:**–ಅಮ್ಮಾಜೀ ! ಭೂಷಣಕುಮಾರನಿಗೆ ಜ್ವರ ತುಂಬ ಹೆಚ್ಚಾಗಿದೆ. ಮೈಮೇಲೆ ಎಚ್ಚರವೇ ಇಲ್ಲ. ರಾಜವೈದ್ಯರು ಬಂದು ನೋಡಿದರು. ತಾಯಿಯ ಹಾಲಲ್ಲದೆ ಮತ್ತೇನನ್ನೂ ಹಾಕಬೇಡವೆಂದು ಹೇಳಿದ್ದಾರೆ !

**ಮಲ್ಲಮ್ಮ:**–ಹೊನ್ನಮ್ಮಾ, ಜ್ವರ ಭೂಷಣಕುಮಾರನೊಬ್ಬನಿಗೇ ಹೆಚ್ಚಾಗಿಲ್ಲ. ಬೆಳವಡಿಯ ರಾಜ್ಯದ ಭಾಗ್ಯದೇವತೆಯೆ ಜ್ವರದಿಂದ ಬೇಯುತ್ತಲಿದ್ದಾಳೆ ! ಈ ಬೇಗೆಯಲ್ಲಿ ಸಿಕ್ಕಿರುವ ತಾಯಿಯಿಂದ ಭೂಷಣ ಕುಮಾರನಿಗೆ ಎಲ್ಲಿಯ ಹಾಲು ಸಿಕ್ಕೀತು ! ಈಗ ನಾನು ಕುಮಾರನೊಬ್ಬನಿಗೇ ತಾಯಿಯಲ್ಲ! ಬೆಳವಡಿಯ ನಾಡಿಗೆಲ್ಲ ತಾಯಿ ! ಬೆಳವಡಿಯ ಮಕ್ಕಳನ್ನೆಲ್ಲ ಬದುಕಿಸಬೇಕಾಗಿದೆ !

**ಈಶಪ್ರಭು:**–ದೇವೀ, ನೀನೀಗ ಕುಮಾರನ ಬಳಿಗೆ ಹೋಗು ! ನಾನು ಕೋಟೆಗಾಳಿಗ ಮುಗಿಸಿ ಕೈ ಕೈ ಕಾಳೆಗವನ್ನಾರಂಭಿಸುವ ಎತ್ತುಗಡೆ ಮಾಡುತ್ತೇನೆ !

**ಮಲ್ಲಮ್ಮ:**–ನಾನೂ ಬರುತ್ತೇನೆ; ನನ್ನ ಅರ್ಧಾಂಗಿತ್ವದ ಕರ್ತವ್ಯವನ್ನು ನೆರವೇರಿಸುತ್ತೇನೆ !

**ಈಶಪ್ರಭು:**–ನೀನೀಗ ಎಲ್ಲಿ ಬರುವುದೂಬೇಡ; ಹೋಗುವುದೂ ಬೇಡ! ತಾಯ್ತನದ ಕರ್ತವ್ಯವೂ ನಿನಗೆ ಇರುತ್ತದೆ. ಹೋಗು ಭೂಷಣನನ್ನು ನೀನು ಜಾಗ್ರತೆಯಿಂದ ನೋಡಿಕೊಳ್ಳುತ್ತಿರು ! ನಾನು ಮಿಕ್ಕುದನ್ನೆಲ್ಲ ಮಾಡುತ್ತೇನೆ.

**ಮಲ್ಲಮ್ಮ:**–ತಾಯ್ತನದ ಕರ್ತವ್ಯ!....ಅಹುದು....ನಾನು ಕುಮಾರನ ತಾಯಿಯೂ ಅಹುದು. ಬಂದೆ, ನಡೆ ಹೊನ್ನಮ್ಮಾ ! ನಾನು ಕುಮಾರನ ತಾಯಿಯೂ ಆಗಿದ್ದೇನೆ; ಬೆಳವಡಿ ರಾಜ್ಯದ ರಾಣಿಯೂ ಆಗಿದ್ದೇನೆ. ಹೆಣ್ಣಿಗೆ ಇಬ್ಬಗೆಯ ಕರ್ತವ್ಯ; ಎರಡರಲ್ಲಿಯೂ ಕೃತಕೃತ್ಯಳಾಗಬೇಕು !

(ದೂರದಿಂದ ಕೂಸಿನ 'ಅಮ್ಮಾ ಎಂಬ ಕೂಗು ಕೇಳುವುದು.)

ಬಂದೆ, ಬಂದೆ ಭೂಷಣಾ ! ನಾನು ನಿನ್ನ ಅಮ್ಮನೂ ಅಹುದೂ !

ಜ

**ನಿವೇದಕ :**

ಸೈನಿಕರೆಲ್ಲರ ಬೆಳಗಿನ ತಂಗೂಳು ಮುಗಿಯಿತು. ನಾಲ್ಕು ತಾಸು ಹೊತ್ತಿಗೆ ಬೆಳವಡಿಯ ಕೋಟೆಯ ಬಾಗಿಲುಗಳು ತೆರೆದುವು. ಈಶಪ್ರಭುವಿನ

ನೇತೃತ್ವದಲ್ಲಿ, ಸೈನಿಕರೆಲ್ಲ ಒಟ್ಟುಗೂಡಿ ವೀರಾವೇಶದಿಂದ ಹೊರಬಿದ್ದರು. ಅದೋ, ಅವರ ರಣಕೋಲಾಹಲವನ್ನು ಕೇಳಿ !

(ರಣವಾದ್ಯಗಳು ಮೊರೆಯುತ್ತಿರುವುವು. ಸೈನಿಕರು ರಣೋತ್ಸಾಹದಿಂದ ಬೊಬ್ಬಿಡುತ್ತಿರುವರು. ಈಶಪ್ರಭು ಕೂಗಿ ಹೇಳುತ್ತಿರುವನು.)

**ಈಶಪ್ರಭು:**–ನನ್ನ ವೀರಸೈನಿಕರೇ ! ಇಂದಿನದು ನಮ್ಮ ನಾಡಿನ ಸತ್ತ್ವಪರೀಕ್ಷೆಯ ಪ್ರಸಂಗ ! ಗೆದ್ದರೆ ನಮಗೆ ಹರಿಹಿಂಗದ ಕೀರ್ತಿ ; ಯುದ್ಧದಲ್ಲಿ ಸತ್ತರೆ ಶಾಶ್ವತವಾದ ಸ್ವರ್ಗಸೌಖ್ಯ ! ನುಗ್ಗಿರಿ ! ಧೈರ್ಯದಿಂದ ಮುಂದುವರಿಯಿರಿ ! ಶೌರ್ಯದಿಂದ ಕಾದಿರಿ ! ಹಗೆಗಳನ್ನು ಮಣ್ಣು ಮುಕ್ಕಿಸಿರಿ !

**ಸೈನಿಕರು:**–ಹುಯ್ ! ಹೋ ! ಜಯ ವೀರಭದ್ರ ! ಬೆಳವಡಿಯ ಒಡೆಯನಿಗೆ ಗೆಲುವಾಗಲಿ ! ಹೋ....ಹೋ....! (ವಿವಿಧ ಕೂಗುಗಳು)

(ರಣವಾದ್ಯದ ಗರ್ಜನೆ)

**ಶಿವಾಜಿಯ ಸೈನಿಕರು:**–ಓ ! ಓ ! ವೈರಿಗಳು ಹೊರಬಿದ್ದು ಬಂದರು ! ಹುಂ ! ಎಲ್ಲರೂ ಸಿದ್ಧರಾಗಿರಿ ! ಒಮ್ಮೇಲೆ ನುಗ್ಗಿ ಮರಾಟರ ಕೈಚಳಕ ತೋರಿಸಿರಿ ! ಹುಯ್....ಹೋ ! (ರಣವಾದ್ಯದ ಘೋಷ)

## ನಿವೇದಕ :

ಅದೋ ನೋಡಿರಿ ! ಪ್ರಾರಂಭವಾಯಿತು ಕೈ ಕೈ ಕಾಳಗ ! ಬೆಳವಡಿಯ ಬಂಟರು ಜೀವದ ಹಂಗು ಇಲ್ಲದೆ, ಹಸಿದ ಹುಲಿಗಳಂತೆ ವೈರಿಯ ಮೇಲೆ ಏರಿ ಹೋಗುತ್ತಿದ್ದಾರೆ- ( ಶಸ್ತ್ರಾಸ್ತ್ರಗಳ ಸಪ್ಪಳ....ರಣಾವೇಶದ ಕೂಗಾಟ ) ಅಲ್ಲಿ ನೋಡಿ ! ಈಶಪ್ರಭುವು ಶಿವಾಜಿಯ ಎದುರಿಗೇ ನಿಂತು ದ್ವಂದ್ವಯುದ್ಧ ನಡೆಯಿಸಿದ್ದಾನೆ. ( ಕತ್ತಿಗಳ ಹೊಡೆದಾಟದ ಶಬ್ದ ) ಓ, ಅವನಾವ ? ವೈಮರೆತು ಯುದ್ಧಮಾಡುತ್ತಿರುವ ಈಶಪ್ರಭುವಿನ ಹಿಂದೆ ಬಂದ ! ಅಯ್ಯೋ, ಪ್ರಭುವಿನ ಕುತ್ತಿಗೆಯ ಮೇಲೆ ಕತ್ತಿಯೇಟು ! ಅಯ್ಯೋ, ಬಿದ್ದ ಬಿದ್ದ ! ಈಶಪ್ರಭುವು ಕುದುರೆಯಿಂದ ಕೆಳಕ್ಕೆ ಬಿದ್ದ ! ಬೆಳವಡಿಯ ವೀರಸಿಂಹ, ಶಿವಾಜಿಯ ಸೇನಾಪತಿಯ ಕಳ್ಳಕದನದ ಬಲೆಗೆ ಬಿದ್ದಿತು.! ಪ್ರಾಣಾಂತಿಕ ಗಾಯವಡೆಯಿತು !

**ಬೆಳವಡಿಯ ಸೈನಿಕರಲ್ಲಿ ಗದ್ದಲ:**–ಅಯ್ಯೋ, ದಣಿಗಳು ಬಿದ್ದರು ! ಕೆಳಗೆ ಬಿದ್ದರು!....ಅಯ್ಯೋ ನಮ್ಮ ದೊರೆ!....ನಮ್ಮ ಪ್ರಭು!....(ಪಿಯಾನೋ ಇಫೆಕ್ಟ್). (ಮತ್ತೆ ಆವೇಶದ ಯುದ್ಧದ ಸಪ್ಪಳು, ವಿವಿಧ ಕೂಗುಗಳು)

**ನಿವೇದಕ :**

ಓ ! ಆಶ್ಚರ್ಯ ! ಕೋಟೆಯ ಬಾಗಿಲಿಂದ ಮಲ್ಲಮ್ಮರಾಣಿಯ ಚಾಮುಂಡೀ ತಂಡ ಹೊರಬೀಳುತ್ತಲಿದೆ ನೋಡಿ! (ಕೂಗು 'ಜಯವೀರಭದ್ರ!' 'ಜೈ ಭೈರವ ಮಾತೇ !') ಕುದುರೆಯೋಡಿಸುತ್ತ ಮಲ್ಲಮ್ಮ ರಾಣಿ ಬಂದಳು! ಕಾಳೆಗದ ಕಣದಲ್ಲಿ ಧುಮುಕಿದಳು ! ಅಬ್ಬಾ ! ಮಲ್ಲಮ್ಮ ಮಾನವಿಯಲ್ಲ, ರಣಚಂಡಿ ! ಹೆಣ್ಣು ಹೆಂಗುಸಲ್ಲ; ಗಂಡೆದೆಯ ವೀರಭೈರವಿ ! ಓ, ನುಗ್ಗಿದಳು, ಮುಮ್ಮುಂದೆ ನುಗ್ಗಿದಳು. ಈಶಪ್ರಭು ಬಿದ್ದಲ್ಲಿಗೇ ಧಾವಿಸಿದಳು.

**ಸೈನಿಕರು:**–ಅಮ್ಮಾಜಿ, ಈಶಪ್ರಭುಗಳ ಕೊಲೆ!....ವೈರಿಯ ಕಳ್ಳಗತ್ತಿಗೆ ಒಡೆಯರು ಆಹುತಿಯಾದರು.... !

**ಮಲ್ಲಮ್ಮ:**–ಈಶಪ್ರಭುಗಳ ಕೊಲೆಯೆ ?....ಹುಂ, ಆಗಲಿ! ಬೆಳವಡಿಯ ರಾಜ್ಯ ಈಶಪ್ರಭುಗಳದೊಬ್ಬರದೇ ಅಲ್ಲ. ನಿಮ್ಮೆಲ್ಲರದೂ ಇದೆ ! ನೀವೀಗ ಒಬ್ಬೊಬ್ಬರೂ ಈಶಪ್ರಭುಗಳಾಗಿ ಹೋರಾಡಬೇಕು; ಬೆಳವಡಿಯ ಮರ್ಯಾದೆಯನ್ನು ಉಳಿಸಬೇಕು. !

(ಸೈನಿಕರೆಲ್ಲರ ಕೂಗು : 'ಜಯ್ ಮಲ್ಲಮ್ಮ ಮಹಾರಾಣಿ ! ಜಯ್ ವೀರಭದ್ರ!' ಮತ್ತೆ ರಭಸದ ಕಾಳೆಗಕ್ಕೆ ಮೊದಲಾಗುವುದು ! )

**ನಿವೇದಕ :**

ಅಲ್ಲಿ ನೋಡಿ ! ಶಿವಾಜಿ ಸೇನಾಪತಿಯನ್ನು ಕರೆದ; ಪಶ್ಚಾತ್ತಾಪದ ಧ್ವನಿಯಲ್ಲಿ ಏನನ್ನೋ ಮಾತನಾಡುತ್ತಿದ್ದಾನೆ. ಆಲಿಸಿರಿ !

* * * * * *

**ಶಿವಾಜಿ:**–ವೆಂಕೋಜಿ, ಈಗ ಯುದ್ಧವನ್ನು ನಿಲ್ಲಿಸಿಬಿಡಿರಿ ! ಈ ಜೀಜಾಮಾತೆಯ ಮಮತೆಯ ಪುತ್ರ, ಹೆಂಗುಸರನ್ನೆದುರಿಸಿ ಎಂದೂ ಯುದ್ಧ ಮಾಡಲಾರನು. ನನ್ನ ತಾಯಿಗೆ ನಾನು ಕೊಟ್ಟ ವಚನವನ್ನು ಪಾಲಿಸಲೇ ಬೇಕು. ಯುದ್ಧ ಒಮ್ಮೆಲೆ ನಿಂತು ಬಿಡಲಿ ! ಸಂಧಿಯ ಧ್ವಜವನ್ನು ಕೂಡಲೆ ಏರಿಸಿ ನಿಲ್ಲಿಸಿರಿ ! ಕ್ಷಣದ ವಿಲಂಬವೂ ಬೇಡ !

**ವೆಂಕೋಜಿ:**–ಮಹಾರಾಜರ ಅನುಜ್ಞೆಯಂತೆ ಏರ್ಪಾಡು ಮಾಡುವೆನು! (ಸೈನಿಕರಲ್ಲಿ ಗಜಿಬಿಜಿ:–' ಓ, ಇದೇನು ? ಸಂಧಿಧ್ವಜ ಎದ್ದು ನಿಂತಿತು ! ಓ ! ಆಶ್ಚರ್ಯ ! ಅಚ್ಚರಿ !')

**ಮಲ್ಲಮ್ಮ:**–ಎಲಾ, ಇದೇನು ? ಶಿವಾಜಿಗೆ ಯುದ್ಧ ಸಾಕಾಯಿತೇ ? ಬೆಳವಡಿಯ ವೀರರೆ ! ಕ್ಷಾತ್ರಧರ್ಮವನ್ನು ಪಾಲಿಸಿರಿ ! ನೀವೂ ನಿಮ್ಮ ಕುಣಿಯುತ್ತಿರುವ ಶಸ್ತ್ರಗಳನ್ನು ತಡೆದು ಹಿಡಿಯಿರಿ !

(ಕುದುರೆಯೋಡಿಸುತ್ತ ಶಿವಾಜಿ ಮಲ್ಲಮ್ಮನ ಹತ್ತಿರ ಬರುವನು.)

**ಶಿವಾಜಿ:**–ರಾಣೀಜಿ ! ನಾನು ಯುದ್ಧವನ್ನು ನಿಲ್ಲಿಸಿ ಬಿಟ್ಟಿದ್ದೇನೆ. ನಡೆದಿರುವ ತಪ್ಪಿಗಾಗಿ ನನಗೆ ನೀವು ಯಾವ ಶಿಕ್ಷೆ ವಿಧಿಸುವಿರೋ ಅದಕ್ಕೆ ಸಿದ್ಧನಾಗಿ ಬಂದಿದ್ದೇನೆ ನಮ್ಮ ನಾಡಿನ ತಾಯಿಯರ ಕೋಪಕ್ಕೂ ಶಾಪಕ್ಕೂ ಹೆದರುವಷ್ಟು ನಾನು ಮರಣಕ್ಕೂ ಹೆದರುವುದಿಲ್ಲ !

**ಮಲ್ಲಮ್ಮ:**–ಇದೆಲ್ಲಿಯ ಯುದ್ಧನೀತಿ ನಿನ್ನದು ? ಕ್ಷತ್ರಿಯನು ಎಂದೂ ಯುದ್ಧಕ್ಕೆ ಹೆದರಲಾಗದು ಶಿವಾಜಿ !

**ಶಿವಾಜಿ:**–ತಾಯಿ, ನಾನು ಯುದ್ಧಕ್ಕೆ ಹೆದರುವ ಹೇಡಿಯಲ್ಲ; ಅಲ್ಲದೆ, ಈಗ ನನಗೆ ಹೆದರುವಂತಹ ಸಂದರ್ಭವಾದರೂ ಏನು ಒದಗಿದೆ ? ನನ್ನ ಈ ಸೇನಾಸಮುದ್ರದ ಎದುರು ನಿಮ್ಮ ತಲೆಯೆಣಿಕೆಯ ಸೈನ್ಯ ಏನು ಮಾಡಬಲ್ಲದು ? ನಾನು ಹೆದರುವುದು ತಾಯಿಭವಾನಿಯ ಸಂದೇಶಕ್ಕೆ ! ಹೆಣ್ಣುಮಕ್ಕಳನ್ನೆದುರಿಸಿ ನಾನೆಂದೂ ಯುದ್ಧಮಾಡಲಾರೆ !

**ಮಲ್ಲಮ್ಮ:**–(ಕೋಪ-ಶೋಕಗಳಿಂದ) ಶಿವಾಜೀ, ನೀನು ನನ್ನ ಪ್ರಭು-ವನ್ನು ಕೊಲೆಮಾಡಿದ ಪಾಪಿ ! ನನ್ನ ಜನ್ಮ-ಜನ್ಮಾಂತರದ ಶತ್ರು !

**ಶಿವಾಜಿ:**–ತಾಯಿ, ನಾನು ಮಾಡಿದ ಪಾಪಕ್ಕೆ ನಿಮ್ಮ ಮನಸ್ಸಿಗೆ ಬಂದ ಪ್ರಾಯಶ್ಚಿತ್ತವನ್ನು ಕೊಡಿರಿ ! ನಿಮಗೆ ಸಮಾಧಾನವಾಗುವಂತಿದ್ದರೆ, ನಿಮ್ಮ ಪತಿಯ ಖಡ್ಗವನ್ನೇ ತೆಗೆದುಕೊಂಡು ನನ್ನನ್ನು ತುಂಡರಿಸಿ ಬಿಡಿರಿ !

**ಮಲ್ಲಮ್ಮ:**–(ರೋಷದಿಂದ) ಶಿವಾಜಿ ....!

**ಶಿವಾಜಿ:**–ಶಾಪಕೊಡಬೇಡಿರಿ ತಾಯಿ ! ಹೆಣ್ಣಿನ ಶಾಪ ಜನ್ಮ-ಜನ್ಮಾಂತರದಲ್ಲಿಯೂ ಬಾಧೆಕೊಡುವುದೆಂದು, ನನ್ನತಾಯಿ ನನಗೆ ಹೇಳಿದ್ದಾಳೆ.

**ಮಲ್ಲಮ್ಮ**:—(ಅಳುತ್ತ) ತಾಯಿ....ತಾಯಿ....! ನನ್ನ ನಾಗಭೂಷನಿಗೆ ನಾನೂ ತಾಯಿ ! ಆದುದರಿಂದಲೇ ಶಿವಾಜಿ, ನಿನ್ನಿಂದ ಹರಕೆ ಕೊಡಿಸಿ, ಅವನನ್ನೂ ನಿನ್ನಂತಾಗಿಸಬೇಕೆಂದಿದ್ದೆವು ! ರಾಜಧಾನಿಗೆ ಕರೆದು ವೈಭವದಿಂದ ಸ್ವಾಗತಿಸಬೇಕೆಂದಿದ್ದೆವು !....

**ಶಿವಾಜಿ**:—ಏನು ? ನಾನು ಇದೇನು ಕೇಳುತ್ತಿದ್ದೇನೆ ?

**ವೆಂಕೋಜಿ**:—ನಿಜ ಮಹಾರಾಜ, ನಮ್ಮ ಸೈನಿಕರು ಬಂಧಿಸಿದ್ದ ಬೆಳವಡಿಯ ರಾಯಸದಾಳು, ಈ ಮಾತನ್ನು ಹೇಳಿದನಂತೆ ! ದ್ವೇಷದಿಂದ ಅಂಧರಾದ ನಮ್ಮ ಸೈನಿಕರು, ಅವನ ಮಾತನ್ನೇ ಲಕ್ಷ್ಯಕ್ಕೆ ತರಲಿಲ್ಲವಂತೆ. ಇಂದು ಬೆಳಗಿನಲ್ಲಿ ನನಗೆ ಈ ಸಂಗತಿ ತಿಳಿಯಿತು !

**ಶಿವಾಜಿ**:—ಅಪರಾಧ ! ಕ್ಷಮಿಸದಂಥ ಮಹಾ ಅಪರಾಧ ! ಈ ತಪ್ಪು ಮಾಡಿದವರಿಗೆ ಉಗ್ರವಾದ ಶಿಕ್ಷೆಯಾಗಬೇಕು ! ತಾಯಿಾ, ಯಾರಿಗೆ ಎಷ್ಟು ಶಿಕ್ಷೆಯನ್ನು ಕೊಟ್ಟರೂ ತೀರದಂತಹ ಅಪರಾಧವಿದು ! ಇದಕ್ಕೆ ದೈವಸಂಕೇತ-ವೆಂದಲ್ಲದೆ ಇನ್ನೇನೂ ಅನ್ನಲಿಕ್ಕೆ ಬರುವಂತಿಲ್ಲ !

**ಮಲ್ಲಮ್ಮ**:—ದೈವಸಂಕೇತ ! ( ಅಳುದನಿಯಲ್ಲಿ ) ಎರಡೇ ಎರಡು ದಿನಗಳಲ್ಲಿ ಬೆಳವಡಿಯ ಸುಖಧಾಮವನ್ನು ಸ್ಮಶಾನವನ್ನಾಗಿ ಮಾಡಿಬಿಟ್ಟ ದೈವ-ಸಂಕೇತ !

**ಶಿವಾಜಿ**:—ಹಾಗೆ ಹೇಳಬೇಡಿ ತಾಯಿಾ ! ನಿಮ್ಮ ಬೆಳವಡಿ ಮತ್ತೆ ಸುಖಧಾಮವಾಗುವಂತೆ ನಾನು ನೋಡಿಕೊಳ್ಳುತ್ತೇನೆ. ನಿಮ್ಮ ಬಾಲರಾಜನ ಹೆಸರಿನಿಂದ ನೀವು ರಾಜ್ಯವನ್ನು ನಡೆಯಿಸಿರಿ ! ನಿಮ್ಮ ಬೆಳವಡಿಯ ರಾಜ್ಯಕ್ಕೆ ಯಾವ ತೊಂದರೆಯೂ ಒದಗದಂತೆ ನೋಡಿಕೊಳ್ಳುವ ಹೊಣೆ ನನ್ನ ಮೇಲೆ ಇರಲಿ ! ನನ್ನ ಸೈನ್ಯದಿಂದ ನಡೆದ ಅಪರಾಧವನ್ನು, ನಿಮ್ಮ ರಾಜ್ಯಕ್ಕೆ ಕಲ್ಯಾಣವನ್ನುಂಟುಮಾಡಿ ಕಡಿಮೆಮಾಡಿಕೊಳ್ಳುತ್ತೇನೆ !

**ಮಲ್ಲಮ್ಮ**:—ಧನ್ಯ ಶಿವಾಜೀರಾಜ ! ನೀನು ಶೌರ್ಯದಿಂದಲ್ಲದಿದ್ದರೂ, ಔದಾರ್ಯದಿಂದ ನನ್ನಮನಸ್ಸನ್ನು ಗೆದ್ದೆ ! ನನಗೀಗ ಏನು ಮಾತಬೇಕೆಂಬುದೇ ತಿಳಿಯದಾಗಿದೆ. ನನ್ನ ಗಂಡನನ್ನು ಕೊಂದವನೆಂದು ನಿನ್ನನ್ನು ದ್ವೇಷಿಸಲೋ, ನಿನ್ನ ಧೀರೋದಾತ್ತ ಗುಣಕ್ಕಾಗಿ ಮೆಚ್ಚಿ ತಲೆಬಾಗಿಸಲೋ !

**ಶಿವಾಜಿ:**–ಅಮ್ಮಾಜಿ, ನೀವು ಭವಾನೀಮಾತೆ! ನನ್ನನ್ನು ದ್ವೇಷಿಸುವುದೂ ಬೇಡ; ನನಗೆ ತಲೆಬಾಗುವುದೂ ಬೇಡ ! ನನ್ನ ಶಿಷ್ಟರಕ್ಷಣೆಯ ದುಷ್ಟದಂಡನೆಯ ಕಾರ್ಯಗಳು ಸಂಪೂರ್ಣವಾಗಿ ನೆರವೇರುವಂತೆ, ಆಶೀರ್ವಾದ ಕೊಡಿರಿ ತಾಯಿ !

**ಮಲ್ಲಮ್ಮ:**–ತಥಾಸ್ತು ! ಶಿವಾಜಿಯಿನ್ನು ಬೆಳವಡಿಯ ಶತ್ರುವಲ್ಲ; ಹಿತಚಿಂತಕನಾದ ಮಿತ್ರ ! ಶಿವರಾಯಾ, ಈಶಪ್ರಭುವಿನ ಮಹಾಪ್ರಯಾಣದ ಕಾರ್ಯವೂ, ಬಾಲರಾಜನ ರಾಜ್ಯಾಭಿಷೇಕದ ಸಮಾರಂಭವೂ, ನಿಮ್ಮ ನೇತೃತ್ವದಲ್ಲಿಯೆ ನಡೆಯಬೇಕು !

**ಶಿವಾಜಿ:**–ತಮ್ಮ ಇಚ್ಛೆಯಂತಾಗಲಿ ತಾಯಿ !

(ಸೈನಿಕರ ಕೂಗು)

‘ಜಯ ಶಿವಾಜೀ ಮಹಾರಾಜ !’ ‘ಜಯ ಮಲ್ಲಮ್ಮ ರಾಣಿ !’

**ಚಾರಣಗೀತ**

ಧನ್ಯೆ ಧನ್ಯೆ ಮಲ್ಲಮ್ಮರಾಣಿ ಬೆಳವಡಿಯ ಭಾಗ್ಯದೇವೀ !
ಧನ್ಯೆ ಕನ್ನಡದ ವೀರಪತಾಕೆಯ ಎತ್ತಿ ಹಿಡಿದ ತಾಯೀ !



# ಬೆಳವಡಿಯ ಪರಿಚಯ



ಬೆಳಗಾಂವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನಲ್ಲಿ, ಜನರೂ ಈಗ ಬೆಳವಡಿಯೊಂದು ದೊಡ್ಡಹಳ್ಳಿ. ವೀರಭದ್ರನ ಗುಡಿಯೊಂದಲ್ಲದೆ ಮಿಕ್ಕ ಐತಿಹಾಸಿಕ–ರಾಜಧಾನಿಯ ಕುರುಹು-ಗಳೇನೂ ಅಲ್ಲಿ ಕಾಣುವುದಿಲ್ಲ. ಆದರೆ, ಆ ಹಳ್ಳಿಯಲ್ಲಿಯ ಹಲವು ಪರಂಪರಾಗತ ಮನೆತನಗಳ ಅಡ್ಡ ಹೆಸರುಗಳನ್ನು ನೋಡಿದರೆ, ಅದು ರಾಜಧಾನಿಯಾಗಿದ್ದಿತೆಂಬುದನ್ನು ಗುರುತಿಸಲು ಬರುವಂತಿದೆ. ಬೆಳವಡಿಯ ಸಂಸ್ಥಾನವನ್ನು ಸಂಪೂರ್ಣವಾಗಿ ನಾಶಗೊಳಿಸಿದವನು ಕಿತ್ತೂರಿನ ದೊರೆ ಮಲಸರ್ಜ. ಸದ್ಯ ನಡೆದು ಕೊಂಡು ಬಂದಿರುವ ಚಚಡಿ, ರುದ್ರಾಪುರ, ತಲ್ಲೂರ, ದೇಸಾಯಿ-ಯರ ಮನೆತನಗಳು ಬೆಳವಡಿಯ ದೊರೆಗಳ ವಂಶಕ್ಕೆ ಸೇರಿದು ವೆಂದು ಹೇಳುತ್ತಾರೆ. ರಾಣಿಮಲ್ಲಮ್ಮ–ಶಿವಾಜಿರಾಜರಲ್ಲಿ ನಡೆದ ಒಪ್ಪಂದದ ಗುರುತಾಗಿ ನೆಟ್ಟ ಸ್ಮಾರಕ ಶಿಲೆಗಳು ಇನ್ನೂ ಇವೆ ಯೆಂದೂ, ಅವುಗಳ ಮೇಲೆ ಮಲ್ಲಮ್ಮ ರಾಣಿ—ಶಿವಾಜಿರಾಜರ ಪ್ರತಿಮೆಗಳಿವೆಯೆಂದೂ ಆ ನಾಡಿನ ಜನರು ಹೇಳುತ್ತಿರುತ್ತಾರೆ.

# ಪಾತ್ರಗಳು

| | |
|---|---|
| ೧. ನಿವೇದಕ | ೧. ವೃಂದಗೀತ ಹೇಳುವವರು |
| ೨. ಕೃಷ್ಣದೇವರಾಯ | ೨. ಅರ್ಚಕ ಬ್ರಾಹ್ಮಣರು |
| ೩. ತಿಮ್ಮರಸ | ೩. ವಾದ್ಯವಾದನಕಾರರು |
| ೪. ನಂಜನಾಯಕ | ೪. ಮಾಂಡಲಿಕ-ಮನ್ನೆಯರು |
| ೫. ಸ್ತುತಿ ಪಾಠಕ | ೫. ಮಂಗಳಾರತಿ ಬೆಳಗುವ ಸುಮಂಗಲೆಯರು |
| ೬. ಪಾರುಪತ್ಯಗಾರ | ೬. ಸೈನಿಕರು |
| ೭. ಎಚ್ಚರದೂಳಿಗದವ | ೭. ಡಂಗುರದವರು |
| ೮. ಚೆನ್ನಮಾಜಿ | ೮. ನರ್ತಕಿಯರು |

# ನವರಾತ್ರಿ



## ವೃಂದಗೀತ

ಜಯ ಭವಾನೀ, ಜಯ ಮೃಡಾನೀ, ಜಯವು ಜಯ ಭುವನೇಶ್ವರಿ !
ಭಯನಿವಾರಿಣಿ, ಭವವಿದಾರಿಣಿ, ಜಯವು ಜಯ ಜಗದೀಶ್ವರೀ !!!

ಚೆನ್ನೆಯೇ ನೀನೆಮ್ಮ ಮನವನು ನಿನ್ನ ವಾಹನವಾಗಿಸೇ—
ವನ್ಯಗಜದೊಲು ನಮ್ಮ ಕಾಡುವ ಬನ್ನಗಳ ನೀ ನೀಗಿಸೇ—
ಕುನ್ನಿಯಂದದ ಹಂದೆತನವನು ಇನ್ನು ನಾಡಿಂದೋಡಿಸೇ ॥ ೧ ॥

ಕರದೊಳಿರುವಾ ಕೈದುಗಳ ಕೊಡು, ಕಿರಿಯರಿಗೆ ನೀನಾಡಲು—
ತರುಬಿ ತಡೆಯುವ ಎಡರ ಬೇಲಿಯ ಮುರಿದು ಮುಂದಕೆ ಸಾಗಲು—
ಹಿರಿಯ ಕನ್ನಡ ನಾಡ ಗುಡಿಯನು ಧರೆಯೊಳೆಲ್ಲಿಯು ಮೆರೆಯಿಸೇ ॥ ೨ ॥

### ೧

### ನಿವೇದಕ

(ಹಿನ್ನೆಲೆಯಲ್ಲಿ ವಾದ್ಯವೃಂದದ ಆಲಾಪನೆಯಿರಬೇಕು)

ನವರಾತ್ರಿ ಕನ್ನಡಿಗರ ನಾಡಹಬ್ಬ. ನಾಡಿನ ಕಳೆದುಹೋದ ಕಾಲದ ಹುರುಳಿನ ಕತೆಯನ್ನು ಸ್ಮರಣೆಗೆ ತಂದುಕೊಳ್ಳುವ ಹುರುಪಿನ ಕಾಲ. ನಾಡೊಳಿರುವ ಜನಬಲ, ಧನಬಲ, ವಿದ್ಯಾಬಲ, ಶಸ್ತ್ರಸಂಪತ್ತಿ, ಕಲಾಸಂಪತ್ತಿ ಆಹಾರಸಂಗ್ರಹಗಳನ್ನು ನಾಡಿಗರೆದುರು ಪ್ರದರ್ಶಿಸಿ, ನಾಡಿನ ಅಳವಿನಳತೆ-ಅಳೆದುಕೊಳ್ಳುವ ಬಲಪರ್ವಕಾಲ. ಬರಲಿರುವ ಕಾಲದ ನಾಡಿನ ಅಭ್ಯುದಯ,-ಅಭಿವೃದ್ಧಿಗಳಿಗಾಗಿ, ರಾಷ್ಟ್ರಸಂವರ್ಧಕ ಶಕ್ತಿದೈವತಗಳಿಗೆ ಪೂಜೆ-ಪ್ರಾರ್ಥನೆ. ಹೋಮ-ಹವನಗಳನ್ನು ಸಲ್ಲಿಸುವ ಭಾವ-ಭಕ್ತಿಯ ಬೆಳೆಗಾಲ. ಕಾವೇರಿಯಿಂದ ಗೋದಾವರಿಯ ವರೆಗೂ ಕನ್ನಡನಾಡನ್ನು ಕಟ್ಟಿ ಆಳಿದ ಕನ್ನಡ

ನಾಡವರು, ಎಂದಿನಿಂದಲೂ ಈ ನವರಾತ್ರಿಯ ಹಬ್ಬವನ್ನು ಜಾನಪದ ಹಬ್ಬವನ್ನಾಗಿ ಆಚರಿಸುತ್ತ ಬಂದಿದ್ದಾರೆ.

ವಿಜಯನಗರದ ಕನ್ನಡ ರಾಜ್ಯರಮಾರಮಣರು, ತಮ್ಮ ರಾಜಧಾನಿಯಲ್ಲಿ ಸಾರ್ವಜನಿಕವಾಗಿ ನೆರವೇರಿಸುತ್ತಿದ್ದ ನವರಾತ್ರಿ ಹಬ್ಬದ ವೈಭವವಂತೂ ಲೋಕವಿಖ್ಯಾತವಾಗಿದೆ ಅಲ್ಲಿ ನಡೆಯುತ್ತಿದ್ದ ಈ ಹಬ್ಬದ ವಿಜೃಂಭಣೆಯನ್ನು ಕಣ್ಣಾರೆ ಕಂಡ ಪಶ್ಚಿಮದೇಶೀಯ ಪ್ರವಾಸಿಗರೂ. ಇರಾಣದ ರಾಯಭಾರಿಯೂ ಬೆರಗಾಗಿ ಬೆರಳು ಕಚ್ಚಿ, ಪವಾಡವೊಂದನ್ನು ಕಂಡ ವಿಸ್ಮಯವಾಣಿಯಲ್ಲಿ ಹೊಗಳಿ ಹಾಡಿದ್ದಾರೆ. ವಿಜಯನಗರದ ಅಂದಿನ ಪರಂಪರೆಯನ್ನೇ ಇದುವರೆಗೂ ನಡೆಯಿಸಿಕೊಂಡು ಬಂದಿರುವ ಮೈಸೂರಿನ ದೊರೆಗಳು, ವರು-ವರುಷವೂ ಜರುಗಿಸುತ್ತಲಿರುವ ನವರಾತ್ರಿ ಮಹೋತ್ಸವವನ್ನು ಕಣ್ಣಾರೆ ಕಂಡವರಿಗೆ, ಈ ನಾಡಹಬ್ಬದ ಮಹತ್ತ್ವ ಎಂತಹದೆಂಬುದನ್ನು ಬೇರೆಯಾಗಿ ಬಣ್ಣಿಸಲಿಕ್ಕೇ ಬೇಡ.

ಒಂದು ಹಳ್ಳಿಯೂ ಒಂದು ರಾಜ್ಯ; ಹಳ್ಳಿಯಗೌಡನೇ ಅಲ್ಲಿಯ ರಾಜ–ಎಂಬ ಭಾವನೆಯಿಂದ ಸಂಘಟಿತವಾದ ನಮ್ಮ ನಾಡಿನ ಹಳ್ಳಿ-ಹಳ್ಳಿಗಳಲ್ಲಿಯೂ, ನವರಾತ್ರಿಯ ಹಬ್ಬ, ಸಾರ್ವಜನಿಕ ಹಬ್ಬವೆಂದು ತಿಳಿದು ನೆರವೇರಿಸುವ ರೀತಿಯನ್ನು, ಈಗಲೂ ನಾವು ಕಾಣಬಹುದು. ನಾಡಿಗರ ಬಾಳಿಗೆ ಆವಶ್ಯಕವಾದ ಶಕ್ತಿ–ಸಂಪತ್ತು-ಜ್ಞಾನಗಳಿಗೆ ಅಭಿಮಾನಿ ದೈವತಗಳಾದ ದುರ್ಗಾ, ಶ್ರೀದೇವಿ, ಸರಸ್ವತಿಯರ ಉಪಾಸನೆಯೇ ಈ ಉತ್ಸವದ ಮುಖ್ಯಾಂಗವಾಗಿ ಇರುವುದು.

ನವರಾತ್ರಿ ಹಬ್ಬಕ್ಕೆ–ನಮ್ಮ ಪ್ರಾಚೀನ ರಾಜಕೀಯ ಇತಿಹಾಸದಲ್ಲಿ ಇನ್ನೂ ಒಂದು ಕಾರಣಕ್ಕಾಗಿ ಮಹತ್ತ್ವವನ್ನುಕೊಡಲಾಗಿದೆ. ರಾಜಮಹಾರಾಜರುಗಳೂ ಸಾಮ್ರಾಟರೂ ಈ ಹಬ್ಬವನ್ನು ಆಚರಿಸಿ, ಶ್ರದ್ಧೆಯನ್ನೂ ಉತ್ಸಾಹವನ್ನೂ ತುಂಬಿಕೊಂಡು, ವೈರಿರಾಜರನ್ನು ಜಯಿಸಲು ದಿಗ್ವಿಜಯಯಾತ್ರೆಯನ್ನು ಕೈಕೊಳ್ಳಲಿಕ್ಕೆ, ವಿಜಯದಶಮಿಯ ಸುಮುಹೂರ್ತದಲ್ಲಿಯೇ ಸೀಮೋಲ್ಲಂಘನವನ್ನು ಮಾಡುತ್ತಿದ್ದರು. ಕನ್ನಡ ನಾಡಿನ ಸಂಸ್ಕೃತಿಯೇ ಮೂರ್ತಿವೆತ್ತಂತಿದ್ದ ಕವಿರಾಜಹಂಸ ರತ್ನಾಕರಸಿದ್ಧನು, ತನ್ನ ‘ಭರತೇಶ

ವೈಭವ'ದಲ್ಲಿ, ಈ ಹಬ್ಬದ ವೈಶಿಷ್ಟ್ಯವನ್ನು ಕುರಿತು ತುಂಬ ಹೇಳಿದ್ದಾನೆ. ಅದನ್ನು ಆತನ ವಾಣಿಯಲ್ಲಿಯೆ ಕೇಳಿರಿ :

'ಲೀಲೆಯೊಳು ರಾಜ್ಯವನಾಳುತಿರ್ದ ಭೂಪಾಲನ ಒತ್ತಿಗೆ' ಬುದ್ಧಿ ಸಾಗರನೆಂಬ ಮಹಾಮಂತ್ರಿ ಬಂದು ಹೀಗೆ ಆಲೋಚನೆ ಗೆಯ್ವನು :

(ರಾಗವಾಗಿ ಅಂದು ತೋರಿಸಬೇಕು)

'ಮಳೆಗಾಲ ಹೋದುದು, ಬೆಳುಗಾಲ ಬಂದುದು,
ದಳ ನಡೆವುದಕಿನ್ನು ಚೆನ್ನು ! ।
ಅಲಸಿಕೆ ಪರಿಹಾರವಾಗಿ ದಿಗ್ವಿಜಯಕಿ-
ನ್ನೆಳಸುವುದೊಳ್ಳಿತು ನೃಪತಿ ! । ॥ ೧ ॥

ಸುಪ್ರದಕ್ಷಿಣವಾಗಿ ಹೋಗಿ ಸಮಸ್ತ ಭೂ-
ಮಿಪ್ರಭುಗಳ ವಶಮಾಳ್ಪ ।
ಭೂಪ್ರದಕ್ಷಿಣ ಕೇಳು ದುಷ್ಟಮರ್ದನ ಶಿಷ್ಟ-
ವಿಪ್ರ-ತಾಪಸ-ಧರ್ಮರಕ್ಷ ! ॥ ೨ ॥

ದ್ವೀಪ-ದ್ವೀಪದೊಳುಕ್ಕಿ ಸೊಕ್ಕಿದ್ದ ದಿಂಡೆಯ
ಭೂಪತಿಗಳ ಹಿಂಡ ನಿನ್ನ ।
ಶ್ರೀಪಾದಕೆರಗಿಸಿಕೊಳಲಡಿಯಿಡು ಜಂಬೂ-
ದ್ವೀಪ ದಕ್ಷಿಣಲೋಕಸೂರ್ಯ ! ॥ ೩ ॥

ಗಿರಿದುರ್ಗ ಜಲದುರ್ಗ ವನದುರ್ಗದೊಳಗಿರ್ದ
ನರಪತಿಗಳ ಸೊಕ್ಕ ಮುರಿದು,
ಭರತ ಷಟ್ಖಂಡದ ಧರೆಯ ಸಾಧಿಸಿ ತೋರು,
ಭರತೇಶನೆಂಬ ಬೀರವನು ! ॥ ೪ ॥

ಎಂದು ನುಡಿದ ಬುದ್ಧಿಸಾಗರ ಮಂತ್ರಿಗಾ-
ನಂದದಿ ಉಡುಗೊರೆಯಿತ್ತು,
ಮುಂದಿಗೆ ಹೇಳಿ ಸುಪಯಣಕುಜ್ಜುಗಿಸು ಹೋ-
ಗೆಂದು ಬೀಳ್ಕೊಟ್ಟನು ಮುಂದೆ ! ॥ ೫ ॥

ನವರಾತ್ರಿ ಜಿನಮಹಿಮೆಯು ಮಾಡಿ ದಶಮಿಯು
ದಿವಸದೊಳ್ ಪಯಣವಪ್ಪುದಕೆ-
ಹವಣಿಸಿ ಜೋಕೆ ಮಾಡುವೆನೆಂದು ಮಂತ್ರಿ ಬಿ-
ನ್ನವಿಸಿ ಬೀಳ್ಕೊಂಡು ನಡೆದನು. ‖ ‖ ೬ ‖

ಮುಂದೆ ಭರತರಾಜನ ರಾಜಧಾನಿಯಲ್ಲಿ ಜರುಗಿದ ನವರಾತ್ರಿ ಮಹೋತ್ಸವದ ಅಂಗೋಪಾಂಗದ ವಿವರಣೆಗಳನ್ನು ರತ್ನಾಕರಸಿದ್ಧನ ಬಾಯಿಂದಲೆ ಕೇಳಿ ತಿಳಿಯಕೊಳ್ಳಬೇಕು.

೨

(ಸ್ವಲ್ಪ ದೂರದಿಂದ ಪರಾಕಿನ ಉಗ್ಗಡಣೆ ಕೇಳುವುದು)

**“ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ, ಮಹಾ**
**ಮಂಡಲೇಶ್ವರ !**
**ಕರ್ಣಾಟಸಾಮ್ರಾಜ್ಯಲಕ್ಷ್ಮೀ ಮನೋಹರ, ಅನ್ಯರಾಜಬಲ-**
**ತಮೋಭಾಸ್ಕರ !**
**ಕನ್ನಡರಾಜ್ಯರಮಾರಮಣ, ಹಿಂದೂರಾಯ ಸುರತ್ರಾಣ !**
**ಮೂರುರಾಯರ ಗಂಡ, ಮಹಾಸಮರ ಪ್ರಚಂಡ....**
**ಶ್ರೀನರಪತಿ ಕೃಷ್ಣದೇವರಾಜೇಂದ್ರ ಭೋ....ಪರಾಕು !**

**ನಿವೇದಕ :**

ಓಹೋ ! ಇದೇನಿದು ? ವಿಜಯನಗರದ ನರಪತಿ ಶ್ರೀಕೃಷ್ಣದೇವ-ರಾಜೇಂದ್ರನ ಸ್ತುತಿಪಾಠಧ್ವನಿ ! ವಿಜಯನಗರದಲ್ಲಿ ಎಂದಿನಂತೆ ನವರಾತ್ರಿಯ ಮಹೋತ್ಸವವನ್ನು ನಡೆಯಿಸಿದ್ದಾನೆ- ಅದನ್ನು ಇಂದಿನವರಾದ ನಾವು ಕಣ್ಣಿಂದ ನೋಡಲಾರೆವಾದರೂ, ಅಂತಃಶ್ರವಣಗಳಿಂದ ಕೇಳಬಲ್ಲೆವು. ಇದೋ, ನರಪತಿಯು ಅಂದಿನ ಓಲಗವನ್ನು ಪೂರಯಿಸಿಕೊಂಡು, ತನ್ನ ಪ್ರೀತಿಯ ರಾಣಿ ಚಿನ್ನಮ್ಮಾಂಬೆಯ ಅಂತಃಪುರಕ್ಕೆ ದಯಮಾಡಿಸಿ ಇದ್ದಾನೆ. ಚಿನ್ನ-ಮಾಂಬೆಯ ಸಂತೋಷ, ಅವಳ ನಗೆಗಣ್ಣಾಲ್ಲಿ ಹೊರಸೂಸುತ್ತಲಿದೆ.

**ಚಿನ್ನಮಾಂಬೆ:**–ದೊರೆಗಳ ಶುಭಾಗಮನದಿಂದ ಧನ್ಯಳಾದೆ.

**ಕೃಷ್ಣರಾಜ:**–ರಾಣೀ, ಬರಲಿರುವ ಶರತ್ಕಾಲದ ಪೌರ್ಣಿಮೆಯ ಚಂದ್ರನನ್ನು, ಇಂದಿನ ವದ್ಯಪಕ್ಷದ ಚತುರ್ದಶಿಯ ದಿನವೇ ನೋಡಬೇಕೆಂಬ ಬಯಕೆಯುಂಟಾಯಿತು; ಅದು ಇಲ್ಲಿಯೇ ನೋಡಲು ಸಿಕ್ಕುವುದೆಂದು ಆತುರದಿಂದ ಬಂದಿದ್ದೇನೆ.

**ಚಿನ್ನಮಾಂಬೆ:**–( ಮೆಲುನಗೆ ನಗುತ್ತ ) ವಿಜಯನಗರದ ರಾಯರ ಪರಾಕ್ರಮಕ್ಕೆ ಕೊರತೆ ಏತರದು ? ಅದು ವದ್ಯಪಕ್ಷದಲ್ಲಿಯೂ ಪೂರ್ಣ ಚಂದ್ರನನ್ನು ಎಳೆದುತಂದು ನಿಲ್ಲಿಸುವ ಸಾಮರ್ಥ್ಯದಿಂದ ಕೂಡಿದೆ.

**ಕೃಷ್ಣರಾಜ:**– ( ವ್ಯಂಗ್ಯನಗೆ ನಗುತ್ತ ) ಅದೇನೋ ಸರಿಯೆ ! ಆದರೆ . ಆ ಪೂರ್ಣಚಂದ್ರನನ್ನು ಆಗಾಗ ಮುಸುಕುವ ಗ್ರಹಣಗಳನ್ನು ಹೊಡೆದೊಡಿಸುವ ಮಂತ್ರಶಕ್ತಿ ಮಾತ್ರ ನಮ್ಮ ಪರಾಕ್ರಮದಲ್ಲಿ ಇಲ್ಲವಾಗಿದೆ.

**ಚಿನ್ನಮಾಂಬೆ:**–ಇಲ್ಲವೇಕೆ ? ಬೇಕಾದಷ್ಟು ಇದೆ. ಎಂತಲೇ ಸನ್ನಿಧಿಯ ದರ್ಶನಮಾತ್ರದಿಂದಲೇ ಎಂತೆಂತಹ ಗ್ರಹಣಗಳೂ ಬಿಟ್ಟು ಓಡಿ– ಹೋಗುತ್ತವೆ. ಗ್ರಹಣದ ನೆನಪುಗಳು ಕೂಡ ಮಾಸಿಹೋಗುತ್ತವೆ.

**ಕೃಷ್ಣರಾಜ:**–ಆದ್ದರಿಂದಲೇ ನಾನು ಭಾವಿಸಿದ್ದೇನೆ; ಬಯಸಿದಾಗೆಲ್ಲ ಇಲ್ಲಿ ಪೂರ್ಣಚಂದ್ರನ ದರ್ಶನ ದೊರೆಯುವುದೆಂದು !

**ಚಿನ್ನಮಾಂಬೆ:**–ತಮ್ಮ ಭಾವನೆ ಯಾವಾಗಲೂ ಸತ್ಯವಾಗಲಿ ! ಅದಾಯಿತಲ್ಲ ! ಇಂದಿನ ಓಲಗದಲ್ಲಿ ನಡೆದ ವಿಶೇಷವೇನೆಂಬುದನ್ನು ಕೇಳ-ಬಹುದೇ ನಾನು ?

**ಕೃಷ್ಣರಾಜ:**–ನೋಡು ಚಿನ್ನಾ, ರಾಯಚೂರಿನ ವಿಜಯದಿಂದ ವಿಜಯನಗರದ ರಾಯರ ಮಹಾಶಕ್ತಿಯ ಪರೀಕ್ಷೆಯಾದಂತಾಗಿದೆ. ಈ ವಿಜಯ್ಯ, ನಮ್ಮ ಪಿತೃಗಳ ಅತೃಪ್ತ ಆಶೆಗಳನ್ನು ಪೂರಯಿಸಿ, ಅವರನ್ನು ಮುಕ್ತರನ್ನಾಗಿ ಮಾಡಿದೆ. ಇನ್ನು ಉಳಿದಿರುವುದೆಂದರೆ ಉತ್ತರದ ದಿಗ್ವಿಜಯ. ವಿಜಯನಗರದ ಅಧೀನತೆಯನ್ನು ತಪ್ಪಿಸಿಕೊಂಡಿರುವ ಉತ್ತರ ಕರ್ನಾಟಕದ ಸೀಮಾಪ್ರದೇಶಗಳನ್ನು ನಾವೀಗ ಸಾಧಿಸಿಕೊಳ್ಳಬೇಕಾಗಿದೆ. ಇಂದಿನ ಓಲಗ-ದಲ್ಲಿ ಇದೇ ವಿಷಯದ ಚರ್ಚೆ ನಡೆಯಿತು.

**ಚಿನ್ನಮಾಂಬೆ:**–ಬರೀ ಚರ್ಚೆಯೊ; ನಿರ್ಣಯವೇನಾದರೂ ಆಯಿತೊ?

**ಕೃಷ್ಣರಾಜ:**–ನಿರ್ಣಯವೂ ಆಯಿತು. ನವರಾತ್ರಿಯ ಮಹೋತ್ಸವವನ್ನು ಮುಗಿಸಿಕೊಂಡು, ವಿಜಯದಶಮಿಯ ದಿನವೇ ವಿಜಯನಗರದ ಸೈನ್ಯದ ಸೀಮೋಲ್ಲಂಘನ–ಎಂದು.

**ಚಿನ್ನಮಾಂಬೆ:**–ಕರ್ಣಾಟಸಾಮ್ರಾಜ್ಯಲಕ್ಷ್ಮಿಗೆ ಗೆಲುವಾಗಲಿ! ಈ ಉತ್ತರದ ದಿಗ್ವಿಜಯ, ವೀರಪತ್ನಿತ್ವದ ನನ್ನ ಹೆಮ್ಮೆಯನ್ನು ಹೆಚ್ಚಿಸಲಿ!

**ಕೃಷ್ಣರಾಜ:**–ಇನ್ನೊಂದು ವಿಷಯ ಚಿನ್ನಾ! ಈ ಸಲದ ನವರಾತ್ರಿಯ ಸಮಾರಂಭದ ಸಂದರ್ಶನಾಕಾಂಕ್ಷೆಯಿಂದ, ಪೋರ್ತುಗೀಜ್ ರಾಯಭಾರಿಯೊಬ್ಬ–ನಾಳೆಯ ದಿನವೇ–ಇಲ್ಲಿಗೆ ಬರಲಿದ್ದಾನೆ. ನಮ್ಮ ರಾಷ್ಟ್ರೀಯ ಮಹೋತ್ಸವದ ವಿವರಗಳನ್ನೆಲ್ಲ ಅವನು ನೋಡಬೇಕೆಂದಿದ್ದಾನಂತೆ!

**ಚಿನ್ನಮಾಂಬೆ:**–ಆ ಕುದುರೆವ್ಯಾಪಾರಿ–ಕೆಂಪುಮೊಗದವರಿಗೆಲ್ಲಾ ನಮ್ಮ ಹಿಂದುಗಳ ಹಬ್ಬದ ವಿಚಾರವೇಕೆ ಬೇಕೋ ?

**ಕೃಷ್ಣರಾಜ:**–ಅವರು ಬರೀ ಕುದುರೆಯ ವ್ಯಾಪಾರಿಗಳಲ್ಲ ಚಿನ್ನಾಜೀ! ಅವರಿಗೂ ಒಂದು ದೇಶವಿದೆ; ಅವರಿಗೂ ಒಂದು ಧರ್ಮವಿದೆ. ತುಂಬಾ ಸಾಹಸಿಗಳು! ಎಲ್ಲೆಲ್ಲಿ ಏನೇನಿದೆಯೆಂಬುದನ್ನು ಕಂಡುಕೊಳ್ಳಬೇಕೆಂದು ತುಂಬ ಕುತೂಹಲಿಗಳವರು! ರಾಜಧಾನಿಯ ನವರಾತ್ರಿಯ ಉತ್ಸವವೆಂದರೆ, ಕನ್ನಡ ನಾಡಿನ ಸಾಮರ್ಥ್ಯ, ಸಂಪತ್ತು, ರಾಜವೈಭವ, ಲಲಿತಕಲೆ–ಇವೆಲ್ಲವು-ಗಳನ್ನೂ ಒಂದೇ ಕಾಲದಲ್ಲಿ ನೋಡಲಿಕ್ಕೆ ಆತನಿಗೆ ಅನುಕೂಲವಾಗುವುದು!

(ದೂರದಿಂದ ಡಂಗುರದ ಸಪ್ಪಳ ಕೇಳುವುದು)

**ಡಂಗುರದವ:**–ಕೇಳಿರಣ್ಣಾ ಎಲ್ಲಾರೂ ಕೇಳ್ರೀ....! ನಾಳೆ ಅಮಾಸಿ ಆದ ಮರುದಿನಾ ಪಾಡ್ಯೇದಿಂದ, ರಾಜಧಾನೀಲಿ ನವರಾತ್ರೀ ಉಚ್ಚಾವ ಮೊದಲಾಗತೈತೆ....! ಅದಕಾಗಿ ನಗರದ ಬೀದಿಬೀದಿಗಳೂ ಮನೆಮನೆಗಳೂ ಅಲಂಕಾರವಾಗಬೇಕು....! ದೇವಸ್ಥಾನದೊಳಗೆ ದೀಪಗಳು ಬೆಳಗಿ, ಹಬ್ಬದ ಅಲಂಕಾರ-ಉಚ್ಚಾವ-ಸೇವೆಗಳೆಲ್ಲಾ ನಡೀಬೇಕು.... ! ಇದಕ್ಕೆ ತಪ್ಪಿದವರು ರಾಜರ ತಪ್ಪುದಂಡಕ್ಕೆ ಗುರಿಯಪ್ಪೋ!

(ಮತ್ತೆ ತಮ್ಮಟೆಯ ಶಬ್ದ)

**ಚಿನ್ನಮಾಂಬೆ:**–ಓ, ಉತ್ಸವದ ಸಿದ್ಧತೆ ರಭಸದಿಂದಲೆ ನಡೆದಂತೆ ತೋರುವುದಲ್ಲ !

**ಕೃಷ್ಣರಾಜ :**–ನಡೆಯಲೇ ಬೇಕಲ್ಲ ದೇವಿ ! ಅಮಾವಾಸ್ಯೆಯ ಸಂಜೆಯೊಳಗಾಗಿ ಎಲ್ಲ ಮಾಂಡಲಿಕ-ಮನ್ನೆಯರೂ ಸರದಾರ ಸಾಮಂತರೂ ಸಾಮ್ರಾಜ್ಯಕ್ಕೆ ಸಲ್ಲಿಸಬೇಕಾದ ಅನ್ನಸಾಮಗ್ರಿಯನ್ನೂ ಕರಭಾರವನ್ನೂ ತಂದು ತಂದು ಒಪ್ಪಿಸತೊಡಗುವರು. ಅಮಾವಾಸ್ಯೆಯ ದಿನವೆ 'ಜಾಳಿಗೆಪೂಜೆ' 'ಅನ್ನ–ಧಾನ್ಯಪೂಜೆ' ನಡೆಯಬೇಕು. ರಾಯಚೂರಿನ ನಮ್ಮ ವಿಜಯದ ಮೂಲಕ, ಈ ಸಲದ ಉತ್ಸವಕ್ಕೆಂದು ದೇಶದೇಶಗಳಿಂದ ತುಂಬ ಜನ ಬರಲಿದೆ. ಎಲ್ಲರ ಪಡಿ-ಪಾನಗಳ ವ್ಯವಸ್ಥೆಯಾಗಬೇಕು.

**ಚಿನ್ನಮಾಂಬೆ :**– ಪಂಪಾಪತಿಯ ಕರುಣೆಯಿರುವ ಕರ್ನಾಟಕ ಸಾಮ್ರಾಜ್ಯದಲ್ಲಿ ಯಾವುದಕ್ಕೆ ಕೊರತೆಯಿದೆ ? ಎಲ್ಲವೂ ದೈವಿಕ ಪವಾಡದಂತೆ ಸುಯಂತ್ರಿತವಾಗಿ ಸಾಗುವುದು.

**ಕೃಷ್ಣರಾಜ:**–ಚಿನ್ನಾ, ನಿನ್ನ ಶ್ರದ್ಧೆ ದೊಡ್ಡದು ! ಆತ್ಮೀಯರಾದ ನಿಮ್ಮೆಲ್ಲರ ಸಾಮ್ರಾಜ್ಯವಿಷಯಕ ಶ್ರದ್ಧೆಯೇ ಈ ವಿಜಯನಗರದ ರಾಯರ ಕೀರ್ತಿಪ್ರಭೆಗೆ ಕಾರಣವಾಗಿದೆ. ಇರಲಿ, ದೇವೀ ! ನಿನ್ನ ಸವಿಯಾದ ಕಂಠ ದಿಂದ, ನೀನೆ ರಚಿಸಿದ ಗೀತೆಯೊಂದನ್ನು ಕೇಳಬೇಕೆಂಬ ಆಶೆಯಾಗಿದೆ.

**ಚಿನ್ನಮಾಂಬೆ:** ದೊರೆಗಳ ಚಿತ್ತ !

(ತಂಬೂರಿಯೊಂದಿಗೆ ಹಾಡಲು ತೊಡಗುವಳು)

ಹೃದಯರಾಜ ಬಾರೋ, ವದನ ವಿಧುವ ತೋರೋ ॥ ಪಲ್ಲವಿ ॥

ಮೃದುಹಾಸವ ಮೆರೆವ ಸುಧಾ-
ಸದನ ಕಾಯುತಿಹೆನಿದೋ ॥ ಅನುಪಲ್ಲವಿ ॥

ಸವೆದುವೆನಿತೊ ರಾತ್ರಿ–ದಿನಃ ।
ಒಲವಿನ ಧನ ಬಯಸಿ....
ಸವಿಗಾನಾ ಗೋಪವರಾ,
ಜವದಲಿ ಬಾ ಶರದಶಶೀ.... ॥ ೧ ॥

೩

## ನಿವೇದಕ :

(ನಾಗಸ್ವರದ ಹಿನ್ನೆಲೆಯೊಂದಿಗೆ)

ಮರುದಿನವೆ ವಿಜಯನಗರದ ಜನರ ಸಂಖ್ಯೆ ಒಂದಕ್ಕೆ ಎರಡಾಯಿತು; ಮೂರಾಯಿತು; ನಾಲ್ಕಾಯಿತು. ಹತ್ತಾಯಿತು. ಗಜಶಾಲೆ, ಹಯಗಳ ಲಾಯ, ದಿವ್ಯಾಯುಧಗಳ ಪೂಜಿಸುವ ಭದ್ರಭವನ, ತುರುಗಳ ಹಟ್ಟಿ; ಸೈನಿಕರ ಬೀಡಾರ ಇವೆಲ್ಲ ಅಲಂಕಾರದಿಂದ ಸಜ್ಜುಗೊಂಡುವು. ಬೀದಿಬೀದಿಗಳಲ್ಲೆಲ್ಲ ಪನ್ನಿರಚಳಯ, ದಾಂಗುಡಿ. ಮನೆ-ಮನೆಯ ಮಾಳಿಗೆಗಳಿಗೆ ಕುರುಜು-ಕೇತುಗಳು. ಕೂಡುಬೀದಿಗಳಲ್ಲಿ ತೋರಣಬಾಗಿಲು; ವಾದ್ಯದ ಕುರುಮಾಡುಗಳು.

ನವರಾತ್ರಿಯ ಓಲಗಕ್ಕಾಗಿಯೆ ಕಟ್ಟಿಸಿದ ಭವ್ಯವಾದ ಓಲಗದ ಮಂಟಪವು ನಾನಾದೇಶಗಳಿಂದ ಬಂದ ಶಿಲ್ಪಕಲಾಪ್ರವೀಣರ ಶಿಲ್ಪಸೌಂದರ್ಯದಿಂದ ತುಂಬಿನಿಂತಿರುವುದು. ಎಲ್ಲೆಲ್ಲಿಯೂ ಅಗಿಲು ಸಾಮ್ರಾಣಿಯ ಧೂಪದ ವಾಸನೆಗಳು. ಮನೆ-ಮನೆಯ ಬಾಗಿಲುಗಳಿಗೂ ತಳಿರುತೋರಣಗಳು, ಹೂವಿನ ಕುಚ್ಚು-ಝಲ್ಲರಿಗಳು. ವಿಜಯನಗರದ ಇಂದಿನ ನೋಟ ಕುಬೇರನ ಅಲಕಾವತಿಯ ವೈಭವವನ್ನು ಮೀರಿಸುವಂತಹದು. ಹಗಲ ಒಂದು ಪ್ರಹರದ ತಾಸು ಬಾರಿಸಿತು ಕೇಳಿರಿ. ( ಗಂಟೆಯ ಸಪ್ಪಳ ) ಅರಮನೆಯ ಓಲಗಶಾಲೆಯಲ್ಲಿ ಕೃಷ್ಣದೇವರಾಯನೂ ಮಂತ್ರಿಯಾದ ಸಾಳುವ ತಿಮ್ಮರಸನೂ ಮಾತನಾಡುತ್ತಲಿದ್ದಾರೆ :

**ಕೃಷ್ಣದೇವ:**– ಅಪ್ಪಾಜಿ, ಸಮಾರಂಭದ ಸಿದ್ಧತೆ ಪೂರ್ಣವಾಗುತ್ತಲಿದೆಯಲ್ಲವೆ ?

**ತಿಮ್ಮರಸ :**–ಎಲ್ಲ ಸಿದ್ಧತೆಯೂ ಪುರಜನ-ಪರಿವಾರದವರ ಸಹಕಾರದಿಂದ ಅಚ್ಚುಕಟ್ಟಾಗಿ ನಡೆದಿದೆ. ಪೋರ್ತುಗೀಜ್, ಪರ್ಶಿಯಾದೇಶದ ರಾಯಭಾರಿಗಳಿಗಾಗಿ, ಹೊರವಳಯದ ಅತಿಥಿಗೃಹದಲ್ಲಿ ವಸತಿಸೌಕರ್ಯವನ್ನು ಏರ್ಪಡಿಸಲಾಗಿದೆ. ಮಿಕ್ಕ ಮಾಂಡಲಿಕರಿಗೆಲ್ಲ ಪ್ರತಿವರ್ಷದಂತೆ ಅವರವರಿಗೆ ನಿಯಮಿತವಾದ ಬೀಡಾರಗಳು ಇದ್ದೇ ಇವೆ.

**ಕೃಷ್ಣರಾಜ**:–ಎಲ್ಲ ಮಾಂಡಲಿಕ–ಮನ್ನೆಯರಿಂದಲೂ ಜಾಳಿಗೆಪೂಜೆ-ಗಾಗಿ ಸಲ್ಲಬೇಕಾದ ಕಪ್ಪಗಾಣಿಕೆ ಬಂದಂತಾಯಿತಲ್ಲವೆ ?

**ತಿಮ್ಮರಸ**:—ಉತ್ತರಕೊಂಕಣ, ಬೆಳಗಾಂವಿನಾಡು, ಬೆಳುವಲನಾಡು ಗಳವರಿಂದ ಮಾತ್ರ ಇದುವರೆಗೂ ಬಂದಿಲ್ಲ; ಬರುವಂತೆಯೂ ತೋರುವುದಿಲ್ಲ.

**ಕೃಷ್ಣರಾಜ**:— ಇದೆಲ್ಲವೂ ವಿಜಾಪುರದವರ ಅಧಿಕಪ್ರಸಂಗದ ಕೈವಾಡ ಅಪ್ಪಾಜೀ ! ರಾಯಚೂರುಯುದ್ಧದಲ್ಲಿ ತಾಗಿದ ಬಿಸಿಯಿಂದ, ಅವರ ಬೆಣ್ಣೆ ಯಿನ್ನೂ ಪೂರ್ಣವಾಗಿ ಕರಗಿಲ್ಲವೆಂದು ತೋರುವುದು. ಈ ಸಲದ ನಮ್ಮ ವಿಜಯತುರಂಗವು, ಕೃಷ್ಣೆಯ ತಿಳಿನೀರಲ್ಲಿ ಈಸಿ ಪಾರಾಗಿ, ಆಚೆಯ ಕರವೀರ, ಕರಹಾಡ ನಾಡುಗಳಲ್ಲಿ ಹೇಷಾರವವನ್ನು ಮಾಡಲೇಬೇಕು. ನಮ್ಮಲ್ಲಿಯ ಅನೇಕ ಜನರಿಗೆ ಈ ವಿಜಯನಗರದ ಹಿಂದೂ ಸುರತ್ರಾಣರ ಸಾಮ್ರಾಜ್ಯವು ಯಾವ ಮಹಾಕಾರ್ಯಕ್ಕಾಗಿ ನಿಂತಿದೆಯೆಂಬುದರ ಕಲ್ಪನೆಯೆ ಇದ್ದಂತಿಲ್ಲ. ಅಧಿಕಾರದಾಶೆ-ಅರ್ಥದಾಶೆಗಳ ಮುಂದೆ, ಸ್ವಧರ್ಮ-ಸ್ವದೇಶಗಳ ಬೆಲೆಯೂ ಅವರಿಗೆ ಇಲ್ಲದಂತಾಗಿದೆ. ಆಗಲಿ, ಇದಿಷ್ಟು ಮಹೋತ್ಸವ ಮುಗಿಯಲಿ. ಆ ಮತ್ತೆ ಆದಿಲ್‌ಶಾಹಿಗೆ, ಉತ್ತರದ ಕಡೆಗೂ ಒಂದು ಕೈ ತೋರಿಸಿಬರೋಣ !

( ಸೇವಕನೊಬ್ಬ ಬಂದು ಹೇಳುವನು. )

"ದೇವರು ಚಿತ್ತಯಿಸಬೇಕು. ಕೊತವಾಲ ನಂಜನಾಯಕರು ಸನ್ನಿಧಿಯ ಆಜ್ಞೆಗಾಗಿ ದಾರಿಕಾಯುತ್ತಲಿದ್ದಾರೆ. "

**ಕೃಷ್ಣರಾಜ**:— ಅವರಿಗೆ ಇಲ್ಲಿಗೇ ಬರಲಿಕ್ಕೆ ಹೇಳು.

**ಸೇವಕ**.— ಪ್ರಭುಗಳ ಆಜ್ಞೆ !

**ತಿಮ್ಮರಸ**:–ನಂಜನಾಯಕರ ಕಡೆಗೆ ನಮ್ಮ ಐದೂ ಜನ ಮಹಾ ಮಾಂಡಲಿಕರ ಆತಿಥ್ಯದ ವ್ಯವಸ್ಥೆಯನ್ನು ಒಪ್ಪಿಸಿ ಕೊಡಲಾಗಿದೆ. ಗೇರುಸೊಪ್ಪೆ-ಭಟಕಳದ ಅರಸರು ನಿನ್ನೆಯ ದಿನವೇ ಬಂದಿರುವುದನ್ನು ಸನ್ನಿಧಿಗೆ ವಿದಿತ ಪಡಿಸಿದ್ದೇನೆ. ಅವರು, ಕರ್ಣಾಟಸಿಂಹಾಸನಕ್ಕೆ, ಕಾಣಿಕೆಯನ್ನು ಒಪ್ಪಿಸುವುದಕ್ಕೆ ತಮ್ಮ ಸಾಗರತೀರದ ಹಲವು ಅಪರೂಪದ ಪದಾರ್ಥಗಳನ್ನು ತಂದಿರುತ್ತಾರೆ.

( ನಂಜನಾಯಕನು ಬರುವನು. )

**ನಂಜ:**–ಪ್ರಭುಗಳಿಗೆ ವಂದನೆಗಳು.

**ಕೃಷ್ಣರಾಜ:**–ಬರಬೇಕು, ನಾಯಕರು.

**ನಂಜ:**–ಇದೀಗ ಬಂಕಾಪುರದ ಮಾಂಡಲಿಕರು ತಮ್ಮ ಪರಿವಾರ ದೊಂದಿಗೆ ಬಂದರು. ಅವರನ್ನು ಸತ್ಕರಿಸಿ ಬೀಡಾರದಲ್ಲಿ ಇರಿಸುವ ಏರ್ಪಾಡು ಮಾಡಿದ್ದೇನೆ. ಅವರಿಂದ ಒಂದು ವಿಶೇಷ ಸಂಗತಿ ಗೊತ್ತಾಯಿತು. ಅದನ್ನು ಸನ್ನಿಧಿಗೆ ಅರಿಕೆ ಮಾಡಿಕೊಳ್ಳಲು ಅವಸರದಿಂದ ಬಂದೆ.

**ತಿಮ್ಮರಸ:**–ಅದೇನು ವಿಶೇಷ ಸಂಗತಿ ನಾಯಕರೇ ?

**ನಂಜ:**–ಬೆಳಗಾಂವಿಯ ಮನ್ನೆಯ ಮಲ್ಲಿನಾಯಕರು, ಕಪ್ಪ-ಕಾಣಿಕೆ ಯೊಂದಿಗೆ ರಾಜಧಾನಿಗೆ ಬರಲು ಹೊರಟಿದ್ದರಂತೆ. ವಿಜಾಪುರದವರ ಸೈನ್ಯದ ತುಣುಕೊಂದು ಅವರನ್ನು ದಾರಿಯಲ್ಲಿಯೆ ತಡೆದು, ಒತ್ತಾಯದಿಂದ ಹಿಂದಕ್ಕೆ ಅಟ್ಟಿದೆಯಂತೆ. ಈಗ ಮಲ್ಲಿನಾಯಕರನ್ನು ಸೆರೆಯಲ್ಲಿ ಇರಿಸಲಾಗಿದೆಯಂತೆ.

**ಕೃಷ್ಣರಾಜ:**– ಒಂದುರೀತಿಯಿಂದ ನಮಗಿದು ಶುಭಸಮಾಚಾರವೇ ಅಲ್ಲವೇ ಅಪ್ಪಾಜಿ! ಆ ನಾಡಿನ ಜನರಲ್ಲಿ ನಮ್ಮ ರಾಜ್ಯದ ಬಗ್ಗೆ ವಿಶ್ವಾಸ-ಪ್ರೀತಿಗಳಿವೆಯೆಂದಹಾಗಾಯಿತು ಮಲ್ಲಿನಾಯಕರನ್ನು ಸೆರೆಯಲ್ಲಿ ಇರಿಸಿರು ವುದರಿಂದ, ಅಲ್ಲಿಯ ಜನರಲ್ಲಿ ಒಂದು ಬಗೆಯ ಅತೃಪ್ತಿ-ಅಸಂತುಷ್ಟಿಗಳು ಹೊತ್ತುತ್ತಿರಬಹುದು.

**ತಿಮ್ಮರಸ:**– ನಮ್ಮ ವಿಜಯಯಾತ್ರೆಗೆ ಕ್ಷೇತ್ರದನ್ನು ಹದಗೊಳಿಸಿಯೇ ಇಟ್ಟಂತಾಯಿತು ; ಇದರ ಪ್ರಯೋಜನವನ್ನು ನಾವು ಪಡೆಯಲೇ ಬೇಕು.

**ಕೃಷ್ಣರಾಜ:**–ನಂಜನಾಯಕರೆ, ಈ ಮಾತು ಇರಲಿ! ರಾಜಧಾನಿಯ ಉಗ್ರಾಣದ ಏರ್ಪಾಡು ತೃಪ್ತಿಕರವಾಗಿದೆಯೆ ?

**ನಂಜನಾಯಕ:**–ಸಮೃದ್ಧವಾಗಿದೆ ಪ್ರಭು! ಉಲುಪೆಯ ಮನೆಗಳು, ಉಗ್ರಾಣಗಳು ಆಹಾರದ ಸರಕುಗಳಿಂದ ತುಂಬಿನಿಂತಿವೆ. ಹಾಲು, ಮೊಸರು, ತುಪ್ಪ, ಎಣ್ಣೆಗಳನ್ನು ಕಲ್ಲುಗಚ್ಚಿನ ಬಾವಿಗಳಲ್ಲಿ ತುಂಬಿಸಿ ತುಂಬಿಸಿ ಇರಿಸಲಾ ಗಿದೆ. ಛತ್ರಗಳಲ್ಲಿ, ಧರ್ಮಶಾಲೆಗಳಲ್ಲಿ, ಮಠಗಳಲ್ಲಿ, ದೇವಾಲಯಗಳಲ್ಲಿ

ಅಡಿಗೆಯ ವ್ಯವಸ್ಥೆಯನ್ನು ಮಾಡಿ, ಸಲ್ಲುವ ಪಡಿಪದಾರ್ಥಗಳನ್ನವರಿಗೆ ಒಪ್ಪಿಸಿ ಆಗಿದೆ. ಎಂದೂ ಇಲ್ಲದಷ್ಟು ಅಡಿಗೆ ಮಾಡುವ ತಿಗುಳ ಜನರು ಈ ಸಲ ಬಂದಿದ್ದಾರೆ. ಅವರನ್ನೆಲ್ಲ ಬೇರೆ ಬೇರೆ ಪಾಕಶಾಲೆಗಳಲ್ಲಿ ನಿಯಮಿಸಿ ಆಗಿದೆ.

**ಕೃಷ್ಣರಾಜ:**–ಸಂತೋಷ! ಇದೊಂದು ರಾಷ್ಟ್ರೀಯ ಯಜ್ಞ! ಸಂಪಾಪತಿಯ ರಾಜ್ಯದ ಸಂಪತ್ತು, ಆತನ ಸಂತಾನದ ಮೂಲಕ ಸಂಪಾಪತಿಗೇ ಸಲ್ಲುತ್ತಿರಬೇಕು. ರಾಜ್ಯದ ಜನಸಂಕುಲದ ಸಂತೃಪ್ತಿಯೇ ದೈವಪ್ರಸಾದವಾಗಿ ನಮಗೆ ಸತ್‌ಫಲ ಕೊಡುವುದು. ಇರಲಿ, ನಾಯಕರೆ! ಈ ಸಲ ವಿದೇಶೀಯ ರಾಯಭಾರಿಗಳು ನಮ್ಮ ಉತ್ಸವ ನೋಡಲಿಕ್ಕೆಂದು ಬಂದಿದ್ದಾರೆ. ನಮ್ಮ ನಾಡಿನ ಎಲ್ಲ ವಿದ್ಯೆ, ಬುದ್ಧಿ, ಜ್ಞಾನ, ಕಲೆಗಳೆಲ್ಲದರ ಪ್ರದರ್ಶನವೂ ವಿವರವಾಗಿ ನಡೆಯಬೇಕು ಎಲ್ಲ ಬಗೆಯ ಜನರೂ ಬಂದಿದ್ದಾರಲ್ಲವೆ?

**ನಂಜನಾಯಕ:**–ಗಣನೆಯಿಲ್ಲದಷ್ಟು ಜನ ಬಂದಿದ್ದಾರೆ. ಓಲಗದ ಪಾರುಪತ್ಯಗಾರರು ಎಲ್ಲರ ಹೆಸರುಗಳನ್ನೂ ಪಟ್ಟಿಮಾಡಿಕೊಂಡು, ಅವರೆಲ್ಲರಿಗೆ ಬಿಡದಿ–ಬತ್ಯಗಳನ್ನು ನೇರ್ಪಡಿಸಿಕೊಟ್ಟಿದ್ದಾರೆ. ಕವಿಗಳು, ಗಮಕಿಗಳು, ವಾದಿಗಳು, ವಾಗ್ಮಿಗಳು, ತಾರ್ಕಿಕರು, ಜ್ಯೋತಿಷಿಗಳು, ವೇದ-ವೇದಾಂಗವಿದ ಪಂಡಿತರು—ನಾಡಿನ ಮೂಲೆಮೂಲೆಗಳಿಂದಲೂ ಬಂದಿದ್ದಾರೆ. ಅಲ್ಲದೆ ಬೊಂಬೆಗಳಾಟದವರು, ಪಾತ್ರದವರು, ನಟ್ಟುವರು, ವಾದ್ಯಕಾರರು, ವೈಣಿಕರು ತುಂಬಿಬಿಟ್ಟಿದ್ದಾರೆ. ಆಟದ ದಾಸರು, ಗಣಿಯಾಟದ ಡೊಂಬರು, ಕೋಡಿಗರು, ಬಹುರೂಪಿಗಳು, ಇಂದ್ರಜಾಲಿಗರು, ಗೋವಿಂದಗತಿಗಳು, ಮಹೇಂದ್ರಜಾಲಿಗರು, ಗಾರುಡಿಗರು, ವಿಸ್ಮಯಕಾರರು, ಸುಪ್ರಸಿದ್ಧ ಜಟ್ಟಿಗಳು, ಮುಷ್ಟಿಯುದ್ಧದ ಮಲ್ಲರು ಲೆಕ್ಕವಿಲ್ಲದಷ್ಟು ಜನ ಬಂದಿದ್ದಾರೆ. ನಾಡಿನ ವಿದ್ಯೆ-ಕಲೆಗಳೆಲ್ಲ ರಾಜಧಾನಿಯಲ್ಲಿಯೆ ಒಟ್ಟುಗೂಡಿದಂತಾಗಿದೆ ಮಹಾಪ್ರಭು!

**ಕೃಷ್ಣರಾಜ:**–ಸಂತೋಷ! ಸಂತೋಷ! ಎಲ್ಲರಿಗೂ ಸರಿಯಾದ ಅವಕಾಶ, ಪುರಸ್ಕಾರ ದೊರೆಯಲಿ! ಯಾರನ್ನೂ ನಿರಾಶೆಗೊಳಿಸುವುದು ಬೇಡ!

**ನಂಜನಾಯಕ:**–ದೊರೆಗಳ ಅಪ್ಪಣೆ!

**ತಿಮ್ಮರಸ:**–(ಸಲುಗೆಯ ಧ್ವನಿಯಲ್ಲಿ) ದೊರೆಗಳಿಗೆ ಇಂದೆಯೆ ಆರೋಗಣೆಯ ಕೊನೆಯ ದಿನ. ನಾಳೆಯಿಂದಲೂ ಒಂಬತ್ತು ದಿನಗಳವರೆಗೂ

ಪ್ರತಿಗಳು ತಾವು! ಒಂಬತ್ತು ದಿನಗಳ ವರೆಗೂ ಉಪವಾಸಿಗಳಾಗಿರಬೇಕು. ಈ ರಾಜಕೀಯ ಅಧ್ವರದ ಯಜಮಾನರು ತಾವು. ಮುಂದಿನ ಉಪವಾಸದ ಕಾರಣದಿಂದ, ಇಂದಿನ ಆರೋಗಣೆಯಲ್ಲಿ ಇಮ್ಮಡಿಯಾಗಿ ಉಣ್ಣುವಂತಹ ಬಿರ್ದುಣಿಸುಗಳ ಸುಗ್ಗಿಯಾಗಿರಬೇಕಲ್ಲ!

**ಕೃಷ್ಣರಾಜ:**– (ನಕ್ಕು) ಯಾಕೆ? ಅಪ್ಪಾಜಿಗೆ ಒಮ್ಮೆಲೆ ಅರಮನೆಯ ಬಿರ್ದುಣಿಸಿನ ನೆನಪಾಯಿತು?

**ತಿಮ್ಮರಸ:**–ಮುಪ್ಪಿನ ನಾಲಗೆ! ಯಾವಾಗಲೂ ರುಚಿಯ ಬದಲಾವಣೆಯನ್ನು ಅಪೇಕ್ಷಿಸುತ್ತಿರುತ್ತದೆ.... ಇನ್ನೇನು?

**ಕೃಷ್ಣರಾಜ:**– ಸರಿ ಸರಿ! ಹಾಗಾದರೆ ಇಂದು ಪಙ್ತಿಲಾಭವನ್ನು ಕೊಟ್ಟುಬಿಡಿರಿ. ನಿಮ್ಮ ಜೊತೆ ಕುಳಿತು ಉಣ್ಣುವುದೆಂದರೆ, ನನ್ನ ತಾಯಿಯ ಕೈದುತ್ತಿನ ಸವಿಯ ನೆನಪಾಗುತ್ತದೆ ಅಪ್ಪಾಜೀ!

**ತಿಮ್ಮರಸ:**– ಇಂದಿನ ಸಹಪಙ್ತಿಯ ಔತಣ, ಇದಕ್ಕೂ ಮೊದಲೇ, ನನಗೆ ಬರಬೇಕಾದ ಕಡೆಯಿಂದ ಬಂದೇ ಬಿಟ್ಟಿದೆ. ತಾವು ಬೇರೆಯಾಗಿ ಔತಣ ಕೊಡಲೇಬೇಕಾಗಿಲ್ಲ!

**ಕೃಷ್ಣರಾಜ:**– (ನಕ್ಕು) ಸರಿ! ಎಲ್ಲರನ್ನೂ ವಶಪಡಿಸಿಕೊಳ್ಳುವ ಮೋಡಿಕಾರರು ನೀವು! ನಂಜನಾಯಕರೇ, ತಾವಿನ್ನು ದಯೆಮಾಡಿಸಬಹುದು.

**ನಂಜನಾಯಕ:**– ಪ್ರಭುಗಳಿಗೂ ದಂಡನಾಯಕರಿಗೂ ನಮನಗಳು.

(ಹೋಗುವನು)

೪

## ನಿವೇದಕ

(ಕೋಳಿಗಳ ಬೆಳಗಿನ ಕೂಗು. ಬಿಲಹರಿರಾಗದ ಆಲಾಪನೆ ಹಿಟಿಲಿನಲ್ಲಿ)

ಇಂದು ಆಶ್ವಿನ ಶುದ್ಧ ಪ್ರತಿಪದೆಯ ಸೂರ್ಯೋದಯದ ಸಮಯ. ರಾಜಧಾನಿಯಲ್ಲೆಲ್ಲ ಹಬ್ಬದ ಉತ್ಸವ-ಉತ್ಸಾಹಗಳೇ ಲಾಸ್ಯವನ್ನಾಡುತ್ತಲಿವೆ. ಹೆಣ್ಣು-ಗಂಡುಗಳಲ್ಲೆಲ್ಲ ಹೊಸ ಹೊಸ ಚಟುವಟಿಕೆ. ಎಲ್ಲರ ಮೈಯನ್ನೂ ಬೆಡಗಿನ ಉಡಿಗೆ-ತೊಡಿಗೆಗಳು ಅಲಂಕರಿಸಿವೆ (ವಿವಿಧ ವಾದ್ಯಗಳ ಸಪ್ಪಳ)

ಅದೋ, ಆಲಿಸಿರಿ! ಮಂಗಲವಾದ್ಯಗಳ ಮೊರೆತ. ಶ್ರೀಕೃಷ್ಣದೇವರಾಯನು, ಸಪ್ತಮಹಾನದಿಗಳ ಸಪ್ತಸಾಗರಗಳ ಪುಣ್ಯೋದಕದಿಂದ ಮಂಗಲಸ್ನಾನ ಮಾಡುತ್ತಲಿದ್ದಾನೆ. ಇದೋ, ಸ್ನಾನ ಮುಗಿಯಿತು. ಸಮ್ರಾಟನ ರತ್ನಾಭರಣಗಳನ್ನು ಬಿಟ್ಟು, ದೀಕ್ಷಾವಸ್ತ್ರಧಾರಿಯಾಗಿ ಪೂಜಾಮಂಟಪಕ್ಕೆ ಹೊರಟ.

(ವಾದ್ಯವೈಭವ, ಸಮೂಹದ ಗಜಬಜೆಗಳೊಡನೆ ಮೆರೆವಣಿಗೆ ಸಾಗಿದ ಧ್ವನಿ)

ಸ್ತುತಿಪಾಠಕರು:—

"ಶ್ರೀಮದ್ರಾಜಾಧಿರಾಜ ಮಹಾರಾಜಪರಮೇಶ್ವರಾ!
ಕರ್ಣಾಟ ಸಾಮ್ರಾಜ್ಯಲಕ್ಷ್ಮೀ ಮನೋಹರಾ!
ಹಿಂದೂರಾಯ ಸುರತ್ರಾಣಾ!
ಗೋ-ದೇವ-ದ್ವಿಜ ಸಂರಕ್ಷಣ ಧುರೀಣಾ!
ವಿಜಯನಗರ ಸತ್ಯಸಿಂಹಾಸನಾಧೀಶ —
ಶ್ರೀಕೃಷ್ಣದೇವರಾಜೇಂದ್ರ, ಭೋ ಪರಾಕು!

(ವಾದ್ಯಗಳ ರಭಸದ ಸಪ್ಪಳ)

## ನಿವೇದಕ

ಇದೋ, ಕೃಷ್ಣದೇವರಾಜೇಂದ್ರ ದೇವತಾಮಂಟಪಕ್ಕೆ ಚಿತ್ತಯಿಸಿದ. ಸಿಂಹವಾಹಿನಿಯಾದ ಮಹಿಷಾಸುರಮರ್ದಿನಿ—ಮಹಾಶಕ್ತಿಯ ಆಳೆತ್ತರದ ಸುಂದರಮೂರ್ತಿ, ಉತ್ಸವಕಾಲದ ಅಲಂಕಾರಗಳಿಂದ ಸಜ್ಜುಗೊಂಡು ಸಂಸ್ಥಾಪಿತವಾಗಿದೆ. ವೈದಿಕರ ಪುರೋಹಿತರ ಬಳಗ, ಮಹಾರಾಜರಿಂದ ದೇವಿಯ ಪೂಜೆ ಮಾಡಿಸುವ ತವಕದಿಂದ ನಿಂತುಕೊಂಡಿದೆ. ವಿಜಯನಗರದ ವೈಭವಕ್ಕೆ ಉಚಿತವೆನಿಸುವ ಪೂಜೋಪಕರಣಗಳು, ಮೂರ್ತಿಯ ಎದುರಲ್ಲಿ ರಾಶಿ-ರಾಶಿಯಾಗಿ ವಿರಾಜಿಸುತ್ತಲಿವೆ. ಆಮಂತ್ರಿತ ಅಧಿಕಾರಿಗಳಿಂದಲೂ ನಗರಪ್ರಮುಖರಿಂದಲೂ ಪೂಜಾಮಂಟಪ ಗಜಬಜಿಸುತ್ತಿದೆ. ಓ, ಮಹಾರಾಜರ ಆಗಮನವಾಗಿಯೆ ಬಿಟ್ಟಿತು.

(ಮತ್ತೆ ವಾದ್ಯದ ಸಪ್ಪಳ)

**ಸ್ತುತಿಪಾಠಕ:–**

**ವೈರಿಬಲ ತಿಮಿರ ಮಾರ್ತಾಂಡ!**
**ಮೂರು ರಾಯರ ಗಂಡ!**
**ಕನ್ನಡ ರಾಜ್ಯರಮಾರಮಣ**
**ಗೋ-ದೇವ-ದ್ವಿಜಸೇವಾಧುರೀಣ!**
**ಶ್ರೀಕೃಷ್ಣದೇವರಾಜ ನರಪತಿ ಭೊ, ಪರಾಕು!**

## ನಿವೇದಕ

ಶ್ರೀಕೃಷ್ಣದೇವರಾಯನು ಪೂಜಾಪ್ರತಿಮೆಗಳ ಬಳಿ ಬಂದು, ಭಕ್ತಿಯಿಂದ ಕೈ ಮುಗಿದು ನಿಂತ. ಸಭೆಯಲ್ಲೆಲ್ಲ ಆತುರ–ಕುತೂಹಲಗಳು. ಅರ್ಚಕ ವೃಂದ ದೊರೆಯನ್ನು ಆದರಿಸಿ, ಪೂಜಾಪೀಠದಲ್ಲಿ ಕುಳ್ಳಿರಿಸಿ ಪೂಜೆಯನ್ನು ಮಾಡಿಸುತ್ತಲಿದೆ:

(ಇಲ್ಲಿ ಪೂಜಾಮಂತ್ರಗಳು ಕೇಳುತ್ತಿರಬೇಕು.)

(ಜೊತೆಗೆ ಮಂಗಳವಾದ್ಯಗಳ ಸಪ್ಪಳವಿರಬೇಕು.)

(ದೂರದಲ್ಲಿ ಸೂಳೆಯರ ಸಂಗೀತದೊಂದಿಗಿನ ನರ್ತನಧ್ವನಿ ಕೇಳುತ್ತಿರಬೇಕು.

## ನಿವೇದಕ

ದೇವಿಯ ಪೂಜೆ ಮುಗಿಯಿತು. ಇನ್ನು ಪಟ್ಟದಾನೆಗಳ ಪೂಜೆ ನಡೆಯುವುದು. ಮಂಟಪದ ಮಧ್ಯಚೌಕದಲ್ಲಿ, ಕಲಾಬತ್ತಿನ ಜೂಲುಗಳಿಂದಲೂ ರತ್ನಾಭರಣಗಳಿಂದಲೂ ಅಲಂಕರಿಸಿದ ನಾಲ್ಕು ಆನೆಗಳು, ಗಂಭೀರವಾಗಿ ಮೈ ತೂಗುತ್ತ ನಿಂತಿರುವುವು. ಇದೋ, ಪುರೋಹಿತರೊಂದಿಗೆ ದೊರೆಯು ಆನೆಗಳ ಪೂಜೆಗೆ ಬಂದ. ಪೂಮಾಲೆಗಳನ್ನರ್ಪಿಸಿ ಪೂಜಿಸಿದ. ಆನೆಗಳಿಗೆ ಆರತಿಯಾಗುತ್ತಲಿದೆ; ಕೇಳಿ!

(ಮಂಗಲಗೀತ—ಸುಮಂಗಲೆಯರಿಂದ)

**ಜಯಮಂಗಲ ಜಯಮಂಗಲ ಜಯಮಂಗಲ ಗಜಲಕ್ಷ್ಮೀ!**
**ಜಯಮಂಗಲ ಜಯಮಂಗಲ ಸಾಮ್ರಾಜ್ಯದ ಶುಭಲಕ್ಷ್ಮೀ!**

## ನಿವೇದಕ

ಆನೆಗಳ ಪೂಜೆ ಮುಗಿಸಿ ದೊರೆಯು, ಪಟ್ಟದ ಕುದುರೆಗಳೆಡೆಗೆ ನಡೆದು ಬಂದ. ರತ್ನಾಭರಣ, ಚೀನಾಂಬರಗಳಿಂದ ವಿಭೂಷಿತವಾದ ಹನ್ನೊಂದು ಜಾತ್ಯಶ್ವಗಳು, ಸಾಮ್ರಾಜ್ಯದ ಅಶ್ವಸಂಪತ್ತಿಯನ್ನು ಪ್ರತಿನಿಧೀಕರಿಸುತ್ತ ನಿಂತುಕೊಂಡಿವೆ. ( ಕುದುರೆಗಳ ಕಿಳಿರು ಕೇಳುವುದು. ) ಪುರೋಹಿತರು ಕೈಗೆ ಕೊಟ್ಟ ಪುಷ್ಪಾಂಜಲಿಯನ್ನು ಕುದುರೆಗಳಿಗೆ ದೊರೆಯು ಅರ್ಪಿಸಿದ. ಸುಮಂಗಲೆಯರು ಮಂಗಲಾರತಿಯೆತ್ತುವರು :

( ಮಂಗಲಗೀತ )

**ಜಯದೇವೀ ಜಗದಂಬೇ ಶಕ್ತಿ ಸಂವಾಹಿನಿ !**
**ಜಯದೇವೀ ಸಮರಜೀವನ ವೀರಜನನೀ !**
**ಜಯದೇವೀ ಜಗದಂಬೇ ! ||**

## ನಿವೇದಕ

ಆನೆ-ಕುದುರೆಗಳ ಪೂಜೆಗಳಾದ ಮೇಲೆ, ದೇವಿಗೆ ಬಲಿಯ ಸಮರ್ಪಣವಾಯಿತು. ಅದೇ ದೇವೀಮಂಟಪದಲ್ಲಿ ಬೇರೊಂದು ಕಡೆಗೆ, ಕಲಿಕುಂಡ ವಜ್ರಪಂಜರ, ಮೃತ್ಯುಂಜಯ, ಬಲಸಿದ್ಧಿ, ಜಯಸಿದ್ಧಿ—ಎಂಬ ಹೆಸರಿನ ಯಜ್ಞಗಳು ನಡೆಯುವುವು. ( ಯಜ್ಞಕ್ಕೆ ಆಹುತಿಗಳನ್ನು ಹಾಕುವ ಮಂತ್ರಗಳು ಕೇಳುತ್ತಿರಬೇಕು. ) ನರಪತಿಯು ಯಜ್ಞಗಳನ್ನು ಒಂದೊಂದಾಗಿ ಸಂದರ್ಶಿಸಿ, ತಾನು ಸಲ್ಲಿಸಬೇಕಾದ ಹೋಮದ್ರವ್ಯವನ್ನು ಅಗ್ನಿಗೆ ಸಲ್ಲಿಸಿ, ಮತ್ತೆ ದೇವಿಯ ಬಳಿ ಬಂದು; ದೇವಿಗೆ ಸಾಷ್ಟಾಂಗವೆರಗಿದ.

( ಬಹುಜನರ ಬಾಯಿಂದ ಜಯಘೋಷ. )

**" ಜಯ ಭುವನೇಶ್ವರೀ ! ಜಯ ಮೃಡಾನಿ ! "**

ದೇವಿಯ ಪೂಜೆಯನ್ನು ಮುಗಿಸಿಕೊಂಡ ದೊರೆಯು, ನವರತ್ನಖಚಿತ ಕಿರೀಟಧಾರಿಯಾಗಿ, ರತ್ನಸಿಂಹಾಸನದ ಮೇಲೆ ಕುಳಿತುಕೊಂಡ.

( ಬಹುಜನರ ಬಾಯಿಂದ ಉಲ್ಲಾಸದ ಕೂಗು )

' ಜಯ ಕನ್ನಡ ರಾಜ್ಯರಮಾರಮಣ ! ಜಯ ಶ್ರೀಕೃಷ್ಣದೇವರಾಜೇಂದ್ರ ! '

( ಓಲಗದ ಪ್ರಾರಂಭದ ವಾದ್ಯಗಳು ಮೊರೆಯುವುವು. )

**ಪಾರುಪತ್ಯಗಾರ:**—ವಿಜಯನಗರದ ಸಾಮ್ರಾಜ್ಯದ ಅಭಿಮಾನಿಗಳಾದ ವೀರಮಾಂಡಲೀಕ—ಮನ್ನೆಯರೆ, ಸಾಮಂತ—ಸರದಾರರೆ, ಶ್ರೀಮಂತ ಶ್ರೇಷ್ಠಿ-ಗಳೇ, ಇಂದು ಇದೀಗ ನವರಾತ್ರಿಯ ಮೊದಲದಿನದ ಓಲಗ ಪ್ರಾರಂಭವಾಯಿತು. ಮೊದಲು ಮಾಂಡಲಿಕ—ಮನ್ನೆಯರ ರಾಜಸಂದರ್ಶನ. ಹೆಸರು ಕೂಗಿದಂತೆ, ಕ್ರಮವಾಗಿ ಬಂದು, ಸಿಂಹಾಸನಕ್ಕೆ ಪ್ರಣಾಮಗಳನ್ನು ಸಲ್ಲಿಸಿ ಮರಳಬೇಕು.

**ಎಚ್ಚರಗೂಳಿಗದವ:**— ಹೋಽಽ ! ಜಾಗು, ಜಾಗು, ಭೋಽಽ ! ಎಚ್ಚರು ಎಚ್ಚರು !

**ಪಾರುಪತ್ಯಗಾರ:**— ಬಂಕಾಪುರದ ಮಹಾಮಾಂಡಲೀಕರು !

( ಆತ ಬಂದು ಪ್ರಣಾಮ ಸಲ್ಲಿಸುತ್ತಾನೆ. )

**ಪಾರುಪತ್ಯಗಾರ:**— ಭಟಕಳದ ಸಾಗರಸಾಮಂತರು !

( ಆತ ಬಂದು ಪ್ರಣಾಮ ಸಲ್ಲಿಸುತ್ತಾನೆ. )

**ಪಾರುಪತ್ಯಗಾರ:**— ತಂಜಾವೂರಿನ ಪೆದ್ದಿರಾಜರು !

( ಆತ ಬಂದು ವಂದನೆ ಸಲ್ಲಿಸುತ್ತಾನೆ. )

**ಪಾರುಪತ್ಯಗಾರ:**— ಮೈಸೂರಿನ ಒಡೆಯರು !

( ಅವರೂ ಬಂದು ಪ್ರಣಾಮ ಸಲ್ಲಿಸುತ್ತಾರೆ. )

**ಪಾರುಪತ್ಯಗಾರ:**— ಇನ್ನು ಗೇರುಸೊಪ್ಪೆಯರಸರು, ದುರ್ಗದ ನಾಯಕರು, ಬಿದನೂರಿನ ಪಾಳೆಯಗಾರರು, ಬೀಳಗಿಯ ನಾಯಕ ರಾಜರು, ಸೋದೆಯ ಪ್ರಭುಗಳು—ಒಬ್ಬೊಬ್ಬರಾಗಿ ಬರಬೇಕು.

( ಅವರೆಲ್ಲಾ ಕ್ರಮವಾಗಿ ಬಂದು, ಪ್ರಣಾಮ ಸಲ್ಲಿಸಿ ಮರಳುವರು. )

**ಪಾರುಪತ್ಯಗಾರ:**— ಇನ್ನುಳಿದ ಮಾಂಡಲಿಕ—ಮನ್ನೆಯರ ಸಂದರ್ಶನ, ಸಂಜೆಯ ಹಿರಿಯೋಲಗದಲ್ಲಿ ನಡೆಯಬೇಕೆಂದು ಮಹಾಪ್ರಭುಗಳ ಆಜ್ಞೆಯಾಗಿದೆ. ಇಂದಿನ ಓಲಗದ ರಾಜಕಾರ್ಯದ ತರುವಾಯ, ಹಾನಗಲ್ಲಿನ ಮೇಳದವರಿಂದ ಗೊಂಬೆಯಾಟವಾಗಲಿದೆ. ಹೊನ್ನಾವರದ ಹೆಗ್ಗಡೆಗಳ ಯಕ್ಷಗಾನ ಪ್ರಸಂಗ ಜರುಗುವುದು. ಕೃಷ್ಣಾತೀರದ ಸುಪ್ರಸಿದ್ಧ ಜಟ್ಟಿಗಳ ಮಲ್ಲ-

ಗಾಳಿಗ ನಡೆಯುವುದು. ಗೋವಳಕೊಂಡದಿಂದ ಬಂದ ಬಹುರೂಪಿಗಳ ವೇಷಗಾರಿಕೆ ನಡೆಯುವುದು. ಅಲ್ಲದೆ ಇಂದ್ರಜಾಲ ಮಹೇಂದ್ರಜಾಲ ವಿದ್ಯೆಗಳೂ ಪ್ರದರ್ಶಿತವಾಗುವುವು. ಜಯ ಭುವನೇಶ್ವರಿ!

**ಎಚ್ಚರೂಳಿಗದವ:**– ಜಾಗು, ಜಾಗು, ಓಲಗ ತೀರ್ದುದೋ, ಓಲಗ ತೀರ್ದುದು!

( ಭೇರಿಗಳ ಎಡೆಬಿಡದ ಮೊಳಗು )

**ಸ್ತುತಿಪಾಠಕ:—**

**ಶ್ರೀಮತ್ ಕರ್ನಾಟಕ ರಾಜ ಕಂಠೀರವ**
**ಪರರಾಜ ಚತುರಂಗ ಪ್ರಲಯಭೈರವ!**
**ಶ್ರೀಪಂಪಾವಿರೂಪಾಕ್ಷ ಪಾದಾಂಬುಜಭೃಂಗ**
**ಸಕಲಕಲಾವಿಜ್ಞಾನ ಪ್ರವೀಣಪ್ರಸಂಗ!**
**ಶ್ರೀಕೃಷ್ಣದೇವ ನರಪತಿ, ಭೋ ಪರಾಕು!**

**೫**

## ನಿವೇದಕ

ನವರಾತ್ರಿಯ ಪೂಜೆಯೋಲಗ ಮುಗಿಸಿ, ಶ್ರೀಕೃಷ್ಣದೇವರಾಜೇಂದ್ರ ಅರಮನೆಯತ್ತ ತೆರಳಿದ. ಮತ್ತೆ ಮೂರನೆಯ ಪ್ರಹರದ ಕೊನೆಯೊಂದಿಗೆ ಇಂದಿನ ಹಿರಿಯೋಲಗ ನಡೆಯುವುದು. ಮೊದಲನೆಯ ದಿನಕ್ಕಿಂತ ಎರಡನೆಯ ದಿನ, ಎರಡನೆಯ ದಿನಕ್ಕಿಂತ ಮೂರನೆಯ ದಿನ, ಮೂರನೆಯ ದಿನಕ್ಕಿಂತ ನಾಲ್ಕನೆಯ ದಿನ—ಹೀಗೆ ಉತ್ತರೋತ್ತರವಾಗಿ, ದಿನಕ್ಕೊಂದು ಪರಿಯ ವೈಭವದಿಂದ, ವಿದ್ಯೆ–ಕಲೆಗಳ ಪ್ರದರ್ಶನಗಳಿಂದ ನವರಾತ್ರಿಯ ಪೂಜೆ-ಹೋಮಗಳೂ ಒಡ್ಡೋಲಗಗಳೂ ಒಂಬತ್ತು ದಿನಗಳವರೆಗೆ ನಡೆಯುತ್ತಲಿದ್ದುವು. ವಿಜಯನಗರದ ಪ್ರಜೆಗಳಿಗೆ ಈ ಹಬ್ಬದ ದಿನಗಳು ಸ್ವರ್ಗದ ಸುಖವನ್ನು ಮರೆಯಿಸಿದ್ದುವು. ಕುದುರೆಗಳ ವೈಹಾಳಿ ನಡೆಯಿತು. ಸೈನಿಕರ ಹುಸಿಕಾಳೆಗಗಳು ನಡೆದುವು. ಮದ್ದು–ಬಾಣಗಳ ವಿಸ್ಮಯಕರವಾದ ಅಗ್ನಿ-ಕ್ರೀಡೆ ನಡೆಯಿತು. ನಾಳೆಯ ದಿನವೇ ದಿಗ್ವಿಜಯಕ್ಕಾಗಿ ಸೀಮೋಲ್ಲಂಘನ.

ಇಂದಿದೋ! ಮಹಾನವಮಿಯ ಶಸ್ತ್ರಪೂಜೆ. ಶಸ್ತ್ರಪೂಜೆ ಮಾಡಿದ ಸೈನಿಕರು, ನಗರದ ಬೀದಿಬೀದಿಗಳಲ್ಲಿ ಕೂಚು ಮಾಡುತ್ತ, ರಣಗೀತವನ್ನು ಹಾಡುತ್ತಲಿದ್ದಾರೆ. ಕೇಳಿ:

( ಬಹುಜನರ ಧ್ವನಿಯಲ್ಲಿ ಹಾಡು )

ಜಯ ಭವಾನೀ, ಜಯ ಮೃಡಾನೀ, ಜಯವು ಜಯ ಭುವನೇಶ್ವರಿ !
ಭಯನಿವಾರಿಣಿ, ಭವವಿದಾರಿಣಿ, ಜಯತು ಜಯ ಜಗದೀಶ್ವರಿ !
ನಿನ್ನ ಹುರುಳಿನ ಹಾಲೊಳಿರುವಾ ಬೆಣ್ಣೆಯನು ನಮಗುಣ್ಣಿಸಿ—
ನಿನ್ನ ತೇಜದ ತಿರುಳು ತುಂಬಿದ ಹಣ್ಣುಹಂಪಲ ತಿನ್ನಿಸಿ—
ಕನ್ನಡದ ಚಿಣ್ಣರನು ಕರುಣದಿ ಉನ್ನತರ ನೀನಾಗಿಸೆ ! ॥ ೧ ॥

**ಜಯ ಭುವನೇಶ್ವರೀ !**



# ಬಲಿಚಕ್ರವರ್ತಿ

(ಪೌರಾಣಿಕ ರೂಪಕ)

# ಪಾತ್ರವಿವರಣೆ



## ಮುಖ್ಯವ್ಯಕ್ತಿಗಳು

| | |
|---|---|
| **ನಿವೇದಕ** | ನಾಟಕದ ಸೂತ್ರಧಾರ |
| **ಬಲಿರಾಜ** | ದೈತ್ಯಕುಲರಾಜ |
| **ಪ್ರಲ್ಹಾದ** | ಬಲಿರಾಜನ ಪಿತಾಮಹ |
| **ಶುಕ್ರಾಚಾರ್ಯ** | ದೈತ್ಯಕುಲಗುರು |
| **ಕಶ್ಯಪಋಷಿ** | ದೇವ-ದೈತ್ಯರ ತಂದೆ |
| **ಅದಿತಿ** | ಕಶ್ಯಪಋಷಿಯ ಹೆಂಡತಿ |
| **ಉಪೇಂದ್ರ** | ಕಶ್ಯಪರ ಹಿರಿಯ ಮಗ |
| **ತ್ರಿವಿಕ್ರಮ** | ಉಪೇಂದ್ರನ ವಿರಾಟ್‌ಮೂರ್ತಿ |

## ಗೌಣ ವ್ಯಕ್ತಿಗಳು

| | | |
|---|---|---|
| ಸ್ತುತಿಪಾಠಕ | ದೈತ್ಯಮಂತ್ರಿ | ಗಂಧರ್ವ |
| ಅಪ್ಸರೆಯರು | ಗಜಾಧಿಕಾರಿ | ತುರಗಾಧಿಕಾರಿ |
| ಉಗ್ರಾಣಾಧಿಕಾರಿ | ನಗರದ ತಳಾರ | ರಾಜಪುರೋಹಿತರು |

## ಧ್ವನಿಸೂಚನೆಗಳು

೧. ಅಭಯವಾಣಿ, ೨. ಸಭೆಯ ಉಲ್ಲಾಸಧ್ವನಿ, ೩. ನರ್ತನಧ್ವನಿ ೪. ದುರ್ನಿಮಿತ್ತ ಗರ್ಜನೆಗಳು, ೫. ಸುರಗಣದ ಪ್ರಾರ್ಥನೆ, ೬. ಯಜ್ಞಾ-ಹುತಿಯ ಮಂತ್ರಧ್ವನಿ, ೭. ತ್ರಿವಿಕ್ರಮಾವತಾರದ ಆಕಾಶಧ್ವನಿ.

# ಬಲಿಚಕ್ರವರ್ತಿ

( ಪೀಠಿಕಾ ಪದ್ಯ )

**ಬಲಿರ್ವಿಭೀಷಣೋಭೀಷ್ಮಃ**
**ಪ್ರಲ್ಹಾದೋ ನಾರದೋ ಧ್ರುವಃ**
**ಏತೇಷಾಂ ಸ್ಮರಣಾನ್ನಿತ್ಯಂ**
**ಮಹಾಪಾತಕ ನಾಶನಂ!**

## ನಿವೇದಕ

ಅಹುದು, ಬಲಿಚಕ್ರವರ್ತಿ ನಿತ್ಯಸ್ಮರಣೀಯ ಮಹಾವಿಭೂತಿ. ಪುರಾಣ ಮತದಂತೆ ಏಳುಜನ ಚಿರಜೀವಿಗಳಲ್ಲಿ ಎಣಿಕೆಗೊಂಡವ. ಭಾರತೀಯರ ಮಹಾಪರ್ವವಾದ ದೀಪಾವಳಿ ದಿನಗಳಲ್ಲಿ, ಕಾರ್ತಿಕ ಶುದ್ಧ ಪ್ರತಿಪದೆಯನ್ನು ತನ್ನ ಶುಭಸ್ಮರಣೆಗಾಗಿ ಕಾಯ್ದಿರಿಸಿದವ. ದೈತ್ಯಕುಲದಲ್ಲಿ ಜನಿಸಿದವನಾದರೂ, ದೇವದೇವನಿಂದ ಭವಿಷ್ಯದಿಂದ್ರಪದವಿಯ ವರ ಪಡೆದು, ಅದಕ್ಕಾಗಿ ಆ ದೇವ-ದೇವನನ್ನೇ ಪಡಿಯರನನ್ನಾಗಿ ಮಾಡಿಕೊಂಡು, ಸುತಲಲೋಕದಲ್ಲಿ ಜೀವಿಸುತ್ತಿರುವವ! ಧನ್ಯ ಧನ್ಯ ದೈತ್ಯಚಕ್ರವರ್ತಿ—ಇಂದ್ರಸೇನಬಲಿರಾಜ!

( ಹೆಣ್ಣಿನ ಕಂಠದಲ್ಲಿ—ಆರ್ತಧ್ವನಿಯೊಂದಿಗೆ )

"ಅಕಟಾ! ಎಲ್ಲಿ ಕೇಳಿದರೂ 'ಧನ್ಯ ಧನ್ಯ ದೈತ್ಯಚಕ್ರವರ್ತಿ ಬಲಿರಾಜ!' ಸತ್ಯ–ನ್ಯಾಯಗಳನ್ನು ಕೇಳುವವರೇ ಇಲ್ಲ! ಎಲ್ಲರೂ ಗೆದ್ದೆತ್ತಿನ ಬಾಲವನ್ನು ಹಿಡಿವವರೆ! ನನ್ನ ದೇವಸಂತಾನ, ಹಿರಿಯ ಮಗನಾದ ದೇವೇಂದ್ರ.... ತಮಗೆ ನೈಸರ್ಗಿಕ ಅಧಿಕಾರವಾಗಿ ಬಂದಿದ್ದ ಸ್ವರ್ಗಸಾಮ್ರಾಜ್ಯವನ್ನು, ಬಲಿಯ ಆಸುರೀ ಸಾಮರ್ಥ್ಯಕ್ಕೆ ಸೋತು, ಅಜ್ಞಾತರಾಗಿ ಅಲೆಯುತ್ತಿದ್ದಾರೆ. ಅವರನ್ನು ಕೇಳುವವರು ಯಾರೂ ಯಾರೂ ಇಲ್ಲವೆ? ಲೋಕ-ಸ್ಥಿತಿಕಾರಣಾ, ಶ್ರೀಮನ್ನಾರಾಯಣಾ! ನಿನ್ನ ನಿಯತಿಯ ಊಳಿಗದವರಲ್ಲವೇ ನನ್ನ ಇಂದ್ರಾದಿ ಸುರಸಂತಾನ! ನಿನ್ನದೇ ಅಲ್ಲವೇ ಅವರ ಮಾನಾಪಮಾನ!

( ಸಾವೇರಿ ರಾಗದಲ್ಲಿ )

ಯಾರು ಕೇಳುವರೆನ್ನ ಯಾರ ಬಳಿ ಮೊರೆಯಿಡುವೆ ?
ಹಾರಿಹೋಯ್ತೇ ಸುರರು ಕುಡಿದ ಅಮೃತದ ಬಲುಹು ?
ಮಾರುಹೋಗಿದೆ ದೇವಸಾಮ್ರಾಜ್ಯ ದೈತ್ಯರಿಗೆ
ತಾರಿಸೈ ದಾನವಾರೀಽಽಽಽ
ತಾರಿಸೈ ದಾನವಾರೀಃಽ— ಶರಣಜನ—
ಸಂಕುಲದ ಭಯನಿವಾರೀ !

## ನಿವೇದಕ

ಓ ! ಯಾರದಿದು ಆಕ್ರಂದನ ? ಕೇಳಿದವರ ಕರುಳನ್ನೆ ಕೊರೆಯುವಂತಹ ಕರುಣಸ್ವರ !

( ಮತ್ತೆ ಹೆಣ್ಣಿನ ಕಂಠದಲ್ಲಿ ಕರುಣಾಧ್ವನಿ )

" ಶಿವಶಿವಾ ! ಜೀವಕುಲಕ್ಕೆ ಮೂಲಕಾರಣನಾದ ಕಶ್ಯಪಮಹಾ-ಮುನಿಯ ಹಿರಿಯ ಹೆಂಡತಿ ನಾನು ! ಇಂದ್ರ, ಅಗ್ನಿ, ವರುಣ, ಯಮ, ಸವಿತೃ ಮೊದಲಾದ ಆದಿತೇಯ ಮಹಾವಿಭೂತಿಗಳ ಜನ್ಮದಾತ್ರಿ ನಾನು ! ಸ್ವರ್ಗದ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ, ಐರಾವತ ಇವುಗಳೆಲ್ಲದರ ಒಡತಿ ನಾನು ! ಅಯ್ಯೋ ! ಇಂದು ಅದೆಲ್ಲವೂ ಕನಸಾಗಿ ಹೋಗಿದೆ ! ಅಸತ್ಯ ಸತ್ಯವನ್ನು ಸೋಲಿಸಿಬಿಟ್ಟಿದೆ ! ಅನ್ಯಾಯ ನ್ಯಾಯವನ್ನು ತುಳಿಯುತ್ತಿದೆ! ದೇವಾಧಿದೇವಾ, ನನ್ನ ಮೊರೆ....ಮೊರೆ....ಮೊರೆ !

## ನಿವೇದಕ

ಓ ! ಈಕೆ ಸುರಸಂತತಿಯ ಜನನಿಯಾದ ಅದಿತಿದೇವಿ ! ಮಕ್ಕಳೆಲ್ಲರ ಅಪಜಯ—ಅಜ್ಞಾತವಾಸಗಳಿಗಾಗಿ, ದುಃಖಭಾರದಿಂದ ಕುಗ್ಗಿಹೋಗಿದ್ದಾಳೆ ! ಅಯ್ಯೊ, ಸ್ವರ್ಗಸಾಮ್ರಾಜ್ಯಾಧಿಪತಿ ಸುರೇಂದ್ರನ ತಾಯಿಯೂ ಹೀಗೆ ಅಳುತ್ತ ಬಾಯಿಬಿಡುತ್ತ ಅಲೆದಾಡಬೇಕಾಯಿತೆ ?

( ಮತ್ತೆ ಹೆಣ್ಣಿನ ಕಂಠದಲ್ಲಿ ಕರುಣಾಧ್ವನಿ )

ದೇವಾ, ಲೋಕವಿಧಾಯಕಾ ! ನಿನ್ನ ನಿಯತಿಯನ್ನು ಮೀರಿ ನಡೆ-ಯುವುದೆಂದರೆ, ನಿನಗೆ ದ್ರೋಹ ಬಗೆದಂತಲ್ಲವೆ ? ಇಂದ್ರನ ಸಿಂಹಾಸನವನ್ನು

ಕಿತ್ತುಕೊಂಡವನು, ವಾಯುವಿನ ಪ್ರಾಣಶಕ್ತಿಯನ್ನು ಕಿತ್ತುಕೊಳ್ಳದೆ ಇರುವನೆ? ಸವಿತೃವಿನ ಪ್ರಭೆಯನ್ನು ಕಸಿದುಕೊಳ್ಳದೆ ಬಿಡುವನೇ ? ತಂದೆ ! ದೈವೀಶಕ್ತಿಯ ಸಂರಕ್ಷಣೆಗಾಗಿ ಇದ್ದ ಅಮೃತ,—ದೈತ್ಯಶಕ್ತಿಯನ್ನು ಸಂರಕ್ಷಿಸತೊಡಗಿದರೆ, ವಿಶ್ವದ ಸ್ಥಿತಿಗೆ ಅವಕಾಶವಿದೆಯೆ ? ಜಗನ್ನೇತ್ರಾ ! ಇಂದು ಮೂರು ಲೋಕದ ಪ್ರಜಾಗಣವೆಲ್ಲವೂ ದೈತ್ಯರಾಜನ ಪೌರುಷಕ್ಕೆ ಮೋಹಗೊಂಡು, ಭವಿಷ್ಯದ ವಿಚಾರದಲ್ಲಿ ಅಂಧವಾಗಿ ಹೋಗಿದೆ. ನೀನೆ ಮನ್ನಿಸಿಕೊಟ್ಟ ಶಕ್ತಿ ಆದಿತೇಯರದು ! ಅದನ್ನು ಸಂರಕ್ಷಿಸುವ ಶಕ್ತಿ ನಿನ್ನದು ಪ್ರಭೋ !

( ದೂರದಿಂದ ಧ್ವನಿ )

**ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ !**

( ಮತ್ತೆ ಹೆಣ್ಣಿನ ಕಂಠದಲ್ಲಿ ಸಂಭ್ರಮದ ಮಾತು )

“ ಓ ! ಧನ್ಯ ಧನ್ಯ ! ದೈವದ ಅಭಯವಾಣಿ ! ನಿಶ್ಚಯವಾಗಿಯೂ ದೈವೀಶಕ್ತಿಗೆ ಗೆಲವು.... ದೈತ್ಯಶಕ್ತಿಗೆ ಅಳಿವು ! ತ್ರೈಭುವನಕ್ಕೂ ಶಾಂತಿ.... ಸಮಾಧಾನ ! ಪರಮಾತ್ಮಪ್ರಭೆಯ ಇನ್ನೊಂದು ಅವತಾರ ! ಆನಂದ, ಆನಂದ !

*          *          *          *

## ನಿವೇದಕ

ದೈತ್ಯರಾಜನ ರಾಜಧಾನಿಯಲ್ಲಿ ಒಡ್ಡೋಲಗ ಸೇರಿದೆ. ಒಡ್ಡೋಲಗದಲ್ಲಿ ದೈತ್ಯಪಿತಾಮಹ ಪ್ರಲ್ಹಾದ ಮೊದಲಾದ ಕುಲವೃದ್ಧರೂ, ದೈತ್ಯಗುರುವಾದ ಶುಕ್ರಾಚಾರ್ಯರೂ, ಬಾಣ, ಧೃತರಾಷ್ಟ್ರ, ತಾಪನ, ಗುರ್ವಕ್ಷ, ಕುಕ್ಷಿ, ಭೀಮ ಮೊದಲಾದ ರಾಜಕುಮಾರರೂ, ಮಂತ್ರಿಗಳೂ ಪೌರರೂ ಆಸನಗೊಂಡು ಕುಳಿತಿರುವರು.

**ಸ್ತುತಿಪಾಠಕ**

ಶ್ರೀಮದ್ರಾಜಾದಿರಾಜ ದೈತ್ಯಸಾಮ್ರಾಜ್ಯ ಚಕ್ರವರ್ತಿ,
ಅಮರೇಂದ್ರ ಸ್ವರ್ಗಸಿಂಹಾಸನಾಕ್ರಮಣಕೀರ್ತಿ
ಶ್ರೀಮದ್ ಬಲೀಂದ್ರ ಪ್ರಭು, ಭೋ ಪರಾಕು !

**ಬಲಿಚಕ್ರವರ್ತಿ:**— ದೈತ್ಯಸಾಮ್ರಾಜ್ಯದ ಅಭಿಮಾನಿಗಳಾದ ಕುಲ-ವೃದ್ಧ ಪುರವೃದ್ಧರೆ, ಮಂತ್ರಿ—ಮಹಾಜನರೇ ! ಅಮರಾವತಿಯ ಆಕ್ರಮಣ

ದಿಂದ ನಮಗಿನ್ನು ಎದುರಾಳಿಗಳಾರೂ ಉಳಿಯಲಿಲ್ಲ. ಮೂರು ಲೋಕದಲ್ಲೂ ಇನ್ನು ಈ ದೈತ್ಯಚಕ್ರವರ್ತಿಯ ಸಾಮ್ರಾಜ್ಯ! ನನ್ನ ಪ್ರಜಾಕಲ್ಯಾಣಕಾರಕವಾದ ಆಡಳಿತದ ರೀತಿಯಿಂದ, ಆ ದೇವರಾಜ ಇಂದ್ರನ ಹೆಮ್ಮೆ—ಅದೇತರ ಬೆಲೆಯದೆಂದು ಎಲ್ಲೆಲ್ಲಿಯೂ ಕಾಣಿಸಿಕೊಡಬೇಕೆಂದಿದ್ದೇನೆ.

**ಪ್ರಲ್ಹಾದ:–** ಭಲೆ, ಬಲಿರಾಜಾ! ದೈತ್ಯರೆಲ್ಲ ದೇವತೆಗಳಂತೆ ನಡೆದುಕೊಂಡರೆ, ಇನ್ನು ಬೇಕೇನು? ಪರಮಾತ್ಮನ ಕಾರ್ಯ ಸುಯಂತ್ರಿತವಾಗಿ ನಡೆದಂತೆಯೆ ಆಗುವುದು. ಅಂದು ಜಗತ್ತಿನಲ್ಲಿ ಅಪೂರ್ಣತೆಯೆಂಬುದು ಉಳಿಯುವುದೇ ಇಲ್ಲ!

**ಬಲಿ:–** ಅಹುದು, ಪೂಜ್ಯ ಪಿತಾಮಹ! ನಿನ್ನ ಮೊಮ್ಮಗನ ರಾಜ್ಯದಲ್ಲಿ ಅಪೂರ್ಣತೆಗೆ ಆಸ್ಪದವೇ ಉಳಿಯಬಾರದೆಂದು ನನ್ನ ಅಪೇಕ್ಷೆಯಾಗಿದೆ.

**ಪ್ರಲ್ಹಾದ:–**ಆನಂದ ವತ್ಸಾ! ನಿನ್ನ ಅಪೇಕ್ಷೆ ಕೈಗೂಡಲಿ!

**ಬಲಿ:–**ಮಂತ್ರಿಗಳೆ, ಇಂದಿನ ಓಲಗದಲ್ಲಿಯ ನರ್ತನಕ್ಕಾಗಿ,ಆ ಘೃತಾಚಿ-ಮೇನಕೆಯರು ಬಂದಿದ್ದಾರಲ್ಲವೆ? ಅವರನ್ನು ಬರಮಾಡಿರಿ!

**ಮಂತ್ರಿ:–** ಸನ್ನಿಧಿಯ ಆಜ್ಞೆಗಾಗಿ ದಾರಿಯನ್ನೇ ಕಾಯುತ್ತಲಿದ್ದಾರೆ, ಮಹಾಪ್ರಭು!

**ಬಲಿ:–** ಹಾಗಾದರೆ ಈಗಲೆ ಬಂದುಬಿಡಲಿ! ಆ ಸ್ವರ್ಗದ ಸುರರಿಗೇ ಮೀಸಲಾಗಿದ್ದ ಗಾಯನ–ನರ್ತನದ ಸೌಂದರ್ಯವು, ಈ ಲೋಕದ ಜನರಿಗೂ ಸವಿಯಲು ಸಿಕ್ಕಲಿ!

[ ಘೃತಾಚಿ—ಮೇನಕೆಯರು ಬಂದ ಗೆಜ್ಜೆಕಾಲಿನ ಸದ್ದು ]

**ಇಬ್ಬರೂ:–** ದೈತ್ಯರಾಜನಿಗೆ ಗೆಲುವಾಗಲಿ!

**ಮಂತ್ರಿ:–** ಅಪ್ಸರಾಮಣಿಯರೆ, ನಮ್ಮ ಉದಾರ ಚಕ್ರವರ್ತಿಗಳು, ಈ ಭೂಲೋಕದ ಜನರಿಗೆ ನಿಮ್ಮ ಸಂಗೀತ–ನರ್ತನದ ಸೌಖ್ಯವನ್ನು ಒದಗಿಸುವ ಸುಯೋಗವನ್ನು ತಂದುಕೊಟ್ಟಿದ್ದಾರೆ. ನಿಮ್ಮ ಜೊತೆಗೆ ಬಂದಿರುವ ಈ ಪುಷ್ಪಸೇನ ಗಂಧರ್ವ, ದೈತ್ಯಚಕ್ರವರ್ತಿಯ ಗುಣಾಂಕಮಾಲೆಯ ಗೀತವನ್ನು ಹಾಡಲಿ; ಅದರೊಂದಿಗೆ ನಿಮ್ಮ ನರ್ತನ ನಡೆಯಲಿ!

**ಗಂಧರ್ವ-ಅಪ್ಸರೆಯರು:**-ಸನ್ನಿಧಿಯ ಚಿತ್ತ !

( ಗಂಧರ್ವನು ಹಾಡಲು ತೊಡಗುತ್ತಾನೆ. ಅದರೊಂದಿಗೆ ಅಪ್ಸರೆಯರ ನರ್ತನದ ಧ್ವನಿಕೇಳುತ್ತದೆ. )

**ಹಾಡು**

ಬಲಿ-ರಾಜ ದೈತ್ಯಕುಲತೇಜ ಪ್ರಜಾಸುರ-
ಭೂಜ ತ್ರಿಲೋಕವಿರಾಜಾ ||
ಬಲ-ದೋಜ ರೂಪಸುಮನೋಜ ಕಲೋನ್ನತ-
ರಾಜ ವಿಕಸಿತಾಂಭೋಜಾ ! || ಪಲ್ಲ ||
ಜಯ-ಜಯ ಜಯ ಸಂಗರಭೀಮಾ !
ಜಯ-ಜಯ ಜಯವಧು ವಿಶ್ರಾಮಾ !
ಜಯ-ಜಯ ದಿತಿವಂಶಲಲಾಮಾ !
ಜಯ-ಜಯ ನವನೀರದ ಶ್ಯಾಮಾ ! ||
ಬಲಿ-ರಾಜ ದೈತ್ಯಕುಲ ತೇಜ ಪ್ರಜಾಸುರ-
ಭೂಜ ತ್ರಿಲೋಕವಿರಾಜಾ ! || ೧ ||

( ನರ್ತನದ ಕೊನೆಯೊಂದಿಗೆ ಓಲಗದಲ್ಲಿ ಆನಂದೋಲ್ಲಾಸದ ಚಪ್ಪಾಳೆಯ ಸಪ್ಪಳ )

**ಶುಕ್ರಾಚಾರ್ಯ:**— ಭಲೆ ಭಲೆ! ಅಪೂರ್ವವಾದ ಸಂಗೀತ! ಸ್ವರ್ಗೀಯವಾದ ನರ್ತನ! ದೈತ್ಯರಾಜಾ! ಇಂದಿನ ಓಲಗದಲ್ಲಿ ವಿಚಾರ ಮಾಡಬೇಕಾದ ರಾಜಕಾರ್ಯ ಬಹಳವಿದೆ. ನಡೆದಿರುವ ನರ್ತನ-ಸಂಗೀತಗಳು ಇಷ್ಟಕ್ಕೆ ನಿಲ್ಲಲಿ! ಇನ್ನು ಇವರಿಗೆ ಸಲ್ಲಬೇಕಾದ ಮನ್ನಣೆಯ ವೀಳೆಯ ಸಲ್ಲಲಿ!

**ಬಲಿರಾಜ:** — ಅಪ್ಸರೆಯರಿಗೂ ಗಂಧರ್ವರಿಗೂ ಇನ್ನು ಹೋಗಲು ಅಪ್ಪಣೆ!

( ಅವರು ಹೊರಟುಹೋಗುವ ಸಪ್ಪು )

**ಬಲಿರಾಜ:**-ಗುರುಗಳು ಇನ್ನು ಮುಂದಿನ ರಾಜಕಾರ್ಯವನ್ನು ವಿಸ್ತರಿಸಬೇಕು.

**ಶುಕ್ರಾಚಾರ್ಯ:** – ದೈತ್ಯರಾಜಾ! ದೇವಪ್ರಮುಖರನ್ನು ನೀನು ಸ್ವರ್ಗದಿಂದ ಓಡಿಸಿದ್ದೀಯಾದರೂ, ದೇವೇಂದ್ರನ ಸಿಂಹಾಸನವನ್ನೇರಿ ಕುಳಿತು-

ಕೊಳ್ಳುವ ಸಾಮರ್ಥ್ಯವನ್ನು ನೀನು ಇದುವರೆಗೂ ಪಡೆದಿಲ್ಲ. ಅದನ್ನು ಪಡೆಯುವ ಅಗತ್ಯವಿದೆಯೆಂಬುದನ್ನು ನಿನಗೆ ಇಂದು ಸೂಚಿಸಬೇಕಾಗಿದೆ.

**ಪ್ರಲ್ಹಾದ:**–ಗುರುಗಳು ನನ್ನ ಅಧಿಕಪ್ರಸಂಗವನ್ನು ಕ್ಷಮಿಸಬೇಕು. ಬಲಿರಾಜನ ಶಕ್ತಿ-ಪೌರುಷಗಳು ನನಗೆ ಮೆಚ್ಚಿಗೆಯ ವಿಷಯಗಳು! ಆದರೆ ಆ ಶಕ್ತಿ-ಪೌರುಷಗಳು, ಕಾರ್ಯಾಕಾರ್ಯ ವಿವೇಚನೆಯನ್ನು ಇರಿಸಿಕೊಂಡಿದ್ದರೆ, ನಮ್ಮ ದೈತ್ಯಕುಲಕ್ಕೂ ಲೋಕಕ್ಕೂ ಮಂಗಳವೆಂದು ನನ್ನ ಅಭಿಪ್ರಾಯ!

**ಶುಕ್ರಾಚಾರ್ಯ:**–ನಿಮ್ಮ ಕಾಲ ಮುಗಿದಿದೆ ದೈತ್ಯಪಿತಾಮಹ! ಈಗ ಬಲಿಚಕ್ರವರ್ತಿಯ ಮಹಾಪೌರುಷ ಮೆರೆಯುವ ಕಾಲ! ದೇವೇಂದ್ರ ನನ್ನು ಸೋಲಿಸಿದ ಈ ಮಹಾಪೌರುಷ, ಅವನ ದೇವಸಿಂಹಾಸನವನ್ನೇರಿ ಕುಳಿತು ವಿಜಯಗೀತ ಹಾಡಿಸಿಕೊಳ್ಳಬೇಕೆಂದು ಈ ದೈತ್ಯಗುರುವಿನ ಅಪೇಕ್ಷೆಯಿದೆ.

**ಪ್ರಲ್ಹಾದ:**—ಈ ನಿಮ್ಮ ಅಪೇಕ್ಷೆ ವಿವೇಕದ್ದಲ್ಲ. ಬಲಿರಾಜನಲ್ಲಿ ದೇವೇಂದ್ರನಾಗಬಲ್ಲ ಯೋಗ್ಯತೆಯೂ ಇರಬಹುದು; ಆದರೆ ಲೋಕನಿಯಾಮಕ, ಎಲ್ಲ ದೇವಗಣದ ಆಡಳಿತಕ್ಕೂ ಕಾಲನಿಯಮವನ್ನು ಹಾಕಿಕೊಟ್ಟಿದ್ದಾನೆ. ಈಗಿರುವ ಇಂದ್ರನ ಅಧಿಕಾರದ ಅವಧಿಯಿನ್ನೂ ಮುಗಿದಿಲ್ಲ.

**ಶುಕ್ರಾಚಾರ್ಯ:**–ಮೃತಸಂಜೀವನ ವಿದ್ಯೆಯನ್ನು ಬಲ್ಲ ಈ ದೈತ್ಯಗುರುವು ಮೃತರನ್ನು ಬದುಕಿಸುವುದನ್ನು ಅರಿತಿರುವಂತೆ, ಬಲಿರಾಯನ ಪೌರುಷದಿಂದ, ಅಧಿಕಾರಿಗಳ ಅಧಿಕಾರಾವಧಿಯನ್ನು ಅಳಿಸುವ ಸಾಮರ್ಥ್ಯವನ್ನೂ ಪಡೆದಿದ್ದಾನೆ!

**ಪ್ರಲ್ಹಾದ:**— ಆಚಾರ್ಯರೇ, ಎಚ್ಚರು! ನೀವು ಲೋಕವಿಧಾಯಕವಾದ ಸೃಷ್ಟಿ-ಸ್ಥಿತಿಗಳ ಕಾರ್ಯದಲ್ಲಿ ಕೈಹಾಕುವ ಕಾರ್ಯ ಮಾಡುತ್ತಲಿದ್ದೀರಿ! ಆ ವಿಧಾಯಕ ಶಕ್ತಿ, ತನ್ನ ನಿಯುಕ್ತಿಯ ವಿರೋಧಿಗಳನ್ನು ಎಂದಿಗೂ ಕ್ಷಮಿಸಳು! ಜೋಕೆ!

**ಶುಕ್ರಾಚಾರ್ಯ:**–ಅಜ್ಜಯ್ಯನಿಗೆ ಸರಿಯಾದ ಮಾತುಗಳನ್ನು ಆಡುತ್ತಿದ್ದೀರಿ! (ನಕ್ಕು) ಹೋಗಲಿ! ಬಲಿರಾಯಾ, ದೇವೇಂದ್ರನ ಆಸನವನ್ನು ಏರಬೇಕಾಗಿದೆಯಲ್ಲವೇ ನಿನಗೆ?

**ಬಲಿರಾಜ:**– ಇದನ್ನು ಬೇರೆಯಾಗಿ ಬಾಯಿಬಿಚ್ಚಿ ಹೇಳಬೇಕಾಗಿದೆಯೆ ಗುರುಗಳೇ! ಅದು ನನ್ನ ಜೀವಿತದ ಕೊನೆಯ ಗುರಿ! ಅದಿತಿಯ ಸಂತಾನದವರಿಗೆ ಅದು ಸಿಕ್ಕಬೇಕೇಕೆ? ದಿತಿಯ ಸಂತಾನದವರಿಗೆ ಅದು ಸಿಕ್ಕಬಾರದೇಕೆ?

**ಪ್ರಲ್ಹಾದ:**–ಅದು ದೈವಸಂಕೇತ ಬಲಿರಾಯಾ!

**ಬಲಿರಾಯ:**–ನಾನು ನನ್ನ ಪೌರುಷದಿಂದ ದೈವಸಂಕೇತವನ್ನು ಬದಲಿಸಬೇಕೆಂದು ಮಾಡಿದ್ದೇನೆ.

( ಒಮ್ಮೆಲೆ ಆಕಾಶದಲ್ಲಿ ಕಾರ್ಮೋಡ ಮುಸುಕುವುದು. ಗುಡುಗುಗಳ ಅಬ್ಬರ, ಸಿಡಿಲುಗಳ ಸಪ್ಪುಳ, ಬಿರುಮಳೆಯ ಆರ್ಭಟ—ಜೊತೆಗೆ ಜನರ ವಿವಿಧರೀತಿಯ ಆರ್ತಸ್ವರದ ಕೂಗು )

**ಬಲಿರಾಯ:** –ಒಮ್ಮಿಂದೊಮ್ಮೆಲೆ ಎಂತಹ ಬಿರುಮಳೆಯಿದು! ಎಷ್ಟೊಂದು ಗುಡುಗು! ಎಷ್ಟೊಂದು ಸಿಡಿಲು!

**ಪ್ರಲ್ಹಾದ :**– ಬಲಿ! ಇಲ್ಲಿ ನಡೆದ ದೈವದ್ರೋಹದ ಮಾತುಗಳಿಂದುಂಟಾದ ದುರ್ನಿಮಿತ್ತಗಳಿವು! ಬರೀ ಸಹಜವಾದ ಬಿರುಮಳೆ-ಸಿಡಿಲುಗಳಲ್ಲ....ಇನ್ನೂ ಏನೇನನ್ನು ನೋಡಬೇಕಾಗುವುದೋ ನಾವು!

**ಶುಕ್ರಾಚಾರ್ಯ :**—ಇಂತಹ ದುರ್ನಿಮಿತ್ತಗಳಿಗೆ ಹೆದರುವವನ ಪೌರುಷವು ಪೌರುಷವೇ ಅಲ್ಲ!

**ಬಲಿರಾಜ:**–ಗುರುಗಳ ಮಾತಿಗೆ ನನ್ನ ಸಂಪೂರ್ಣ ಒಪ್ಪಿಗೆ ಇದೆ.

**ಗಜಾಧಿಕಾರಿ:**–( ಆತುರದಿಂದ ಓಡುತ್ತ ಬಂದು ) ಮಹಾಪ್ರಭು, ಆನೆಗಳಿಗೇನು ರೋಗ ಬಂದಿದೆಯೊ! ನಿಂತಲ್ಲಿಯೆ ಬಿದ್ದುಕೊಂಡು ಹೊರಳಾಡುತ್ತಲಿವೆ!

**ತುರಗಾಧಿಕಾರಿ:**– ಮಹಾಪ್ರಭು, ಕುದುರೆಗಳೆಲ್ಲ ಆರೆಜೀವಿಗಳಾಗಿ ನಿಂತು, ಕಣ್ಣೀರು ಕರೆಯುತ್ತಲಿವೆ. ಅದೇಕೆಂಬುದು ತಿಳಿಯದಾಗಿದೆ.

**ಉಗ್ರಾಣಾಧಿಕಾರಿ:**– ಸನ್ನಿಧಿಗೆ ಅವಧಾರು! ಶಿವನ ಉರಿಗಣ್ಣು ಹೋಲುವ ಸಿಡಿಲುಗಳು ಬಡಿದು, ಉಗ್ರಾಣಗಳೆಲ್ಲ ಉರಿಯುತ್ತಲಿವೆ.

**ನಗರದ ತಳಾರ:**– ಭಯಂಕರವಾದ ವರ್ತಮಾನ ಮಹಾದೇವ! ಕಾಡಿನ ಹಿಂಸ್ರಪಶುಗಳೆಲ್ಲ ರಾಜಧಾನಿಯಲ್ಲಿ ನುಗ್ಗಿ, ಪ್ರಜೆಗಳಿಗೆಲ್ಲ ತೊಂದರೆ ಕೊಡುತ್ತಲಿವೆ.

**ಪ್ರಲ್ಹಾದ:**- ನೋಡಿದೆಯೇನು ಮಗು.......ದೈವೀಶಕ್ತಿಯ ಪ್ರಕೋಪವನ್ನು!

**ಬಲಿರಾಯ:**– ನಿಮ್ಮ ದೈವೀಶಕ್ತಿಗಿಂತಲೂ ಹೆಚ್ಚಿನ ಮಾಯೆಯಾಟ ಗಳನ್ನು, ನಮ್ಮ ಅಸುರೀಶಕ್ತಿ ಮಾಡಬಲ್ಲದು ಪಿತಾಮಹ!

**ಪ್ರಲ್ಹಾದ:**– ದೈವೀಶಕ್ತಿ ಮಾಯೆಯಾಟವಲ್ಲ ಮಗು! ಅದರೆದುರು ನಿಮ್ಮ ಅಸುರೀಶಕ್ತಿಯ ಮಾಯೆಯಾಟ ಮಣ್ಣು ತಿನ್ನಬೇಕಾಗುವುದು.

**ಶುಕ್ರಾಚಾರ್ಯ:**– ಅದರ ಚಿಂತೆಯನ್ನು ನಮಗೆ ಬಿಟ್ಟು ಬಿಡಿರಿ ಅಜ್ಜಯ್ಯಾ।

( ದೂರದಲ್ಲಿ ಧ್ವನಿಯು ಕೇಳುವುದು: )

' ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ '

**ಪ್ರಲ್ಹಾದ:**– ಕೇಳಿದೆಯಾ ಮಗು, ದೈವವಾಣಿಯನ್ನು!

**ಬಲಿರಾಜ:**– ಕೇಳಿದೆ ಕೇಳಿದೆ; ನನ್ನ ಪೌರುಷವೂ ನಿನ್ನ ದೈವದ ಕೆಲಸವನ್ನೇ ಮಾಡಬೇಕೆನ್ನುವುದು. ಅದೂ ಸಾಧುಗಳನ್ನು ಸಲಹಬೇಕೆನ್ನುವುದು; ದುಷ್ಕೃತರನ್ನು ವಿನಾಶಗೊಳಿಸಬೇಕೆನ್ನುವುದು. ಧರ್ಮವನ್ನು ಸಂಸ್ಥಾಪಿಸಬೇಕೆನ್ನುವುದು ದೈವದ ಬಲವಿಲ್ಲದೆಯೂ ಇದನ್ನು ಮಾಡಲಿಕ್ಕೆ ಬರುವುದೆಂಬುದನ್ನು ಲೋಕದೆದುರು ಸಿದ್ಧ ಮಾಡಿ ತೋರಿಸಬೇಕಾಗಿದೆ.

**ಶುಕ್ರಾಚಾರ್ಯ:**– ಭಲೆ! ಭಾಪು! ಬಲಿರಾಯನ ಮಾತು ಒಂದೊಂದೂ ರತ್ನದ ಬೆಲೆಯವು!

**ಪ್ರಲ್ಹಾದ:**– ಆಗಲಿ ಗುರುಗಳೆ, ನಿಮ್ಮ ರತ್ನಗಳು ನಿಮ್ಮಲ್ಲಿಯೆ ಇರಲಿ! ನನಗೆ ಇನ್ನು ಈ ಸಭೆಯಲ್ಲಿ ಸ್ಥಾನವಿಲ್ಲ. ಹೊರಟು ಹೋಗುವ ಮೊದಲು ಒಂದು ಮಾತನ್ನು ಹೇಳುತ್ತೇನೆ ಕೇಳಿರಿ! ನನ್ನ ತಾತನಿಗಾಗಿ ಅಂದು ಆ

ದೈಪ, ನೃಸಿಂಹನಾಗಿ ಭೂಮಿಗೆ ಇಳಿಯಬೇಕಾಯಿತು. ಇಂದು ಈ ವೊಮ್ಮಗ-ನಿಗಾಗಿ ಮತ್ತೆ ಆ ಶಕ್ತಿ ಯಾವ ರೂಪದಿಂದ ಬರಲಿದೆಯೋ ಏನೋ! ಬಲಿರಾಯಾ! ಎಚ್ಚರದಿಂದಿರು! ಈ ಮುಪ್ಪಿನ ಎದೆಯನ್ನು ಕುದಿಸುವಂತಹ ಕಾರ್ಯಕ್ಕೆ ಕಾಲಿಡಬೇಡ. ( ರಭಸದಿಂದ ಹೊರಟು ಹೋಗುತ್ತಾನೆ. )

**ಶುಕ್ರಾಚಾರ್ಯ:**— ನಾನು ಯಾವಾಗಲೂ ನೋಡುತ್ತೇನೆ: ಬಿಸಿ ನೆತ್ತರಿನ ತರುಣರ ಸಾಹಸಜೀವನಕ್ಕೆ, ಈ ತಂಪುಗಟ್ಟಿದ ನೆತ್ತರಿನ ಮುದುಕರು ತಣ್ಣೀರೆರೆಯಲಿಕ್ಕೆ ಬರುತ್ತಾರೆ! ಬಲಿರಾಯಾ, ನಿನ್ನ ಅಜ್ಜನ ಎಚ್ಚರಿಕೆಯ ಮಾತು, ನಿನ್ನ ಅಭಿಪ್ರಾಯವನ್ನು ಬದಲಿಸಿಲ್ಲವಷ್ಟೆ ?

**ಬಲಿರಾಜ:**— ಲವಮಾತ್ರವೂ ಬದಲಿಸಿಲ್ಲ. ದೈವೀಶಕ್ತಿ ಮಾಡಬೇಕಾದ ಕಾರ್ಯವನ್ನೇ ನಾನು ಮಾಡಿ, ಲೋಕಕ್ಕೆ ಸುಖ-ಸಮಾಧಾನಗಳನ್ನುಂಟು ಮಾಡಬೇಕೆಂದು ಪಣತೊಟ್ಟಿರುವಾಗ, ದೈವವು ನನಗೇಕೆ ವಿರೋಧಿಯಾಗ ಬೇಕು ? ಈಗ ಆಚಾರ್ಯರು ಅಪ್ಪಣೆ ಕೊಡಿಸಬೇಕು: ಅಮರೇಂದ್ರನ ಸಿಂಹಾಸನವನ್ನು ಏರುವ ಸಾಮರ್ಥ್ಯವು ನನಗೆ ಬರಬೇಕಾದರೆ, ನಾನೇನು ಮಾಡಬೇಕು ?

**ಶುಕ್ರಾಚಾರ್ಯ:**— ನೂರು ಅಶ್ವಮೇಧ ಯಜ್ಞಗಳನ್ನು ವಿಧಿಪೂರ್ವಕ ವಾಗಿ ಮಾಡಿ ಶತಕ್ರತುವಾಗಬೇಕು. ಇನ್ನೇನೂ ಇಲ್ಲ. ಶತಕ್ರತುವಲ್ಲದವನು ಇಂದ್ರಪದವಿಗೆ ಅರ್ಹನೆನಿಸನು |

**ಬಲಿರಾಜ:**— ಇಷ್ಟೇ ಅಲ್ಲವೆ ? ಅದಕ್ಕೆಷ್ಟು ಶ್ರಮವಹಿಸಬೇಕಾದೀತು ? ಲೋಕದಲ್ಲಿ ನಮ್ಮನ್ನೆದುರಿಸುವ ವೈರಿಗಳಾರೂ ಉಳಿದಿಲ್ಲವಾದುದರಿಂದ, ನಮ್ಮ ಯಾಗದ ಕುದುರೆಯನ್ನು ಕಟ್ಟಿ ಕಾಳಗ ಹೂಡುವವರೇ ಇಲ್ಲ. ದೈತ್ಯರಾಜ್ಯದ ಭಾಂಡಾರದಲ್ಲಿ ಯಜ್ಞಕ್ಕೆ ಬೇಕಾಗುವ ಧನಸಂಪತ್ತಿಗೂ ಕೊರತೆಯಿಲ್ಲ. ಶುಭಸ್ಯ ಶೀಘ್ರಂ! ಉಚಿತ ಕಾಲವನ್ನು ಕಂಡುಹಿಡಿದು, ಯಜ್ಞಗಳನ್ನು ಒಂದರ ಹಿಂದೊಂದರಂತೆ ಪ್ರಾರಂಭಿಸಿಬಿಡಿರಿ! ಈ ದೈತ್ಯರಾಜ ಶತಕ್ರತುವೂ ಆಗಿಬಿಡಲಿ!

**ಶುಕ್ರಾಚಾರ್ಯ:**— ತಥಾಸ್ತು ! ([illegible]ಲಗ ಕೊನೆಗೊಳ್ಳುವ ದುಂದುಭಿ-ಧ್ವಾನ)

* * * *

## ನಿವೇದಕ

ಬಲಿರಾಯನ ಅಶ್ವಮೇಧಯಾಗಗಳು ನಿರ್ವಿಘ್ನವಾಗಿ ಒಂದರ ಹಿಂದೊಂದರಂತೆ ಪೂರಯಿಸಲು ತೊಡಗಿದುವು. ( ಯಜ್ಞಾಹುತಿಯ ಮಂತ್ರದ ಹಿನ್ನೆಲೆಯೊಂದಿಗೆ) ಒಂದಾಯಿತು; ಎರಡು ನೆರವೇರಿದುವು. ಮೂರನೆಯದು ಮುಗಿಯಿತು; ನಾಲ್ಕಾಯಿತು. ಹತ್ತಾದುವು. ಇಪ್ಪತ್ತು, ಮೂವತ್ತು, ಐವತ್ತು, ಎಂಬತ್ತು, ತೊಂಬತ್ತು ಮಹಾಯಾಗಗಳು ಮುಗಿದುವು. ದೇವೇಂದ್ರನಿಗೂ ದೇವೇಂದ್ರನ ಪರಿವಾರದವರಿಗೂ ಮರಣಸಂಕಟ ತಲೆದೋರಲು ತೊಡಗಿತು. ಯಜ್ಞಗಳಿಗೆ ವಿಘ್ನವನ್ನುಂಟುಮಾಡುವ ಸಾಮರ್ಥ್ಯವೂ ಅವರಲ್ಲಿ ಉಳಿದಿರಲಿಲ್ಲ. ತಾರಕಶಕ್ತಿಯಾದ ಶ್ರೀಮನ್ನಾರಾಯಣನಿಗೆ ಮೊರೆಯಿಡುವುದೊಂದೇ ಈಗ ಅವರಿಗೆ ಉಳಿದಿರುವ ದಾರಿ! ಅದೋ, ಅವರ ದೈನ್ಯಪ್ರಾರ್ಥನೆಯನ್ನು ಕೇಳಿರಿ!

( ಅನೇಕರ ಧ್ವನಿಯಲ್ಲಿ ಕರುಣಾಪ್ರಾರ್ಥನೆ: )

**ಮತ್ಸ್ಯಾಕೃತಿಧರ ಜಯದೇವೇಶ। ವೇದೋದ್ಧಾರಕ**
**ಕೂರ್ಮಸ್ವರೂಪ ॥**
**ಮಂದರ ಗಿರಿಧರ ಸೂಕರರೂಪ। ಭೂಮಿವಿದಾರಕ**
**ಜಯದೇವೇಶ! ॥**
**ಕಾಂಚನಲೋಚನ ನರಹರಿರೂಪ। ದುಷ್ಟ ಹಿರಣ್ಯಕ-**
**ಭಂಜನ ಜಯಭೋ! ॥**

(ಒಂದೇ ಒಂದು ದೂರದ ಧ್ವನಿಯಲ್ಲಿ ಅಭಯವಾಣಿ)

**ಪರಿತ್ರಾಣಾಯ ಸಾಧೂನಾಂ। ವಿನಾಶಾಯಚ ದುಷ್ಕೃತಾಂ।**
**ಧರ್ಮಸಂಸ್ಥಾಪನಾರ್ಥಾಯ। ಸಂಭವಾಮಿ ಯುಗೇ ಯುಗೇ! ॥**

( ಅನೇಕರ ಧ್ವನಿಯಲ್ಲಿ)

'ಓ! ಅಭಯವಾಣಿ! ಧರ್ಮಸಂಸ್ಥಾಪನೆಗಾಗಿ ಇನ್ನೊಂದು ಅವತಾರದ ಅಭಿವಚನ! ದೇವಸಾಮ್ರಾಜ್ಯಕ್ಕೆ ಗೆಲವು! ಗೆಲವು!'

## ನಿವೇದಕ

ಕಶ್ಯಪಮುನಿಯ ಆಶ್ರಮದ ಎಲೆಮನೆಯೊಂದರಲ್ಲಿ, ಕಶ್ಯಪ ಅವನ ಹಿರಿಯ ಹೆಂಡತಿ ಅದಿತಿದೇವಿ ಮಾತನಾಡುತ್ತಲಿದ್ದಾರೆ :

**ಕಶ್ಯಪ:**– ದೇವಸಾಮ್ರಾಜ್ಯಕ್ಕೆ ಗೆಲವು ಉಂಟಾಗಲೇ ಬೇಕು! ದೇವೇಂದ್ರ ಮರಳಿ ಸ್ವರ್ಗಸಾಮ್ರಾಜ್ಯವನ್ನು ಏರಲೇಬೇಕು!

**ಅದಿತಿ:**– (ಅಳುದನಿಯಲ್ಲಿ) ಇದು ನಮ್ಮ ಹಾರಯಿಕೆಯಿಷ್ಟೆ! ಕಾಲದ ಒಡಲಲ್ಲಿ ಹುದುಗಿರುವ—ಇನ್ನೆಂತಹ ಕಷ್ಟದ ಕೂಳನ್ನು ಉಣ್ಣ ಬೇಕಾಗಿದೆಯೋ ನಾವು!

**ಕಶ್ಯಪ:**– ಅಧೀರೆಯಾಗದಿರು ದೇವೀ! ದೇವಕುಲಕ್ಕೆಲ್ಲ ಬಸಿರನ್ನಿತ್ತ ಮಹಾಮಾತೃ ನೀನು? ನಿನಗೂ ತಾಳ್ಮೆಯೆಂಬುದು ಇರಬೇಡವೇ?

**ಅದಿತಿ:**– ಇದು ತಾಯ ಕರುಳಿಗೆ ಕೇಳುವ ಪ್ರಶ್ನೆಯೇ?

**ಕಶ್ಯಪ**– ತಾಯ ಕರುಳಿನೊಂದಿಗೆ, ಮುನ್ನೋಟ ನೋಡಬಲ್ಲ ಒಳ-ಗಣ್ಣೂ ನಿನಗಿವೆ ದೇವೀ! ಹಿಡಿದ ಗ್ರಹಣ ಬಿಡಲೇಬೇಕು....ಇಲ್ಲವಾದರೆ, ಅಂದೆಯೇ ವಿಶ್ವಕ್ಕೆ ಅಳಿಗಾಲ ಕಟ್ಟಿಟ್ಟ ಮಾತು! ನಿನ್ನ ಈ ಕಿರಿಯ ಮಗ ಉಪೇಂದ್ರ....ಸಾಮಾನ್ಯ ವ್ಯಕ್ತಿಯಲ್ಲ! ಅಸಾಮಾನ್ಯ ದೈವೀಶಕ್ತಿಯೆಂಬುದನ್ನು ಮರೆಯದಿರು! ಅಂದು ನಿನಗೆ ದೈವದ ಅಭಯವಾಣಿ ದೊರೆತುದನ್ನು ನೀನೇ ಹೇಳಲಿಲ್ಲವೆ?

**ಅದಿತಿ:**– ಅದೇನೋ ಹೇಳಿದೆ ಸರಿ! ಈ ಮೂರು ಗೇಣಿನ ಮಾಣವಕ, ಆ ತ್ರೈಲೋಕ್ಯವಿಜಯಿಯಾದ ಮಹಾವೀರ ಬಲಿಯನ್ನು ಹೇಗೆ ದಮನ ಮಾಡೀತು—ಎಂದು ಸಂದೇಹ ನನಗೆ!

**ಕಶ್ಯಪ:**– ಮತ್ತೆ ಮತ್ತೆ ಸಾಮಾನ್ಯಸ್ತ್ರೀಯಂತೆ ಮಾತನಾಡುತ್ತಲಿದ್ದೀ ನೀನು! ದೈವದ ಅಭಯವಾಣಿಯಲ್ಲಿಯೂ ನಿನಗೆ ಸಂದೇಹವೆ? ನಮ್ಮ ಉಪೇಂದ್ರನ ಜಾತಕ–ಸಾಮುದ್ರಿಕದ ಶುಭಲಕ್ಷಣಗಳನ್ನು ನೋಡಿದ್ದೀಯೋ ಇಲ್ಲವೋ!

**ಅದಿತಿ:**– ಮುನಿರಾಯಾ, ಸುರೇಂದ್ರನಿಗೆ ಯಾವ ಶುಭಲಕ್ಷಣಗಳ ಕೊರತೆಯಿದ್ದುವು? ಆ ಲಕ್ಷಣಗಳು ಇಂದು ಏನು ಮಾಡುತ್ತಲಿವೆ?

**ಕಶ್ಯಪ:**– ಪಾಪ! ದುಃಖದಗ್ಧ ಹೃದಯಿನಿಯಾದ ತಾಯಿ! ಕರುಳ ಕೊರಗಿನ ಮುಂದೆ ಇನ್ನೇನೂ ಇವಳಿಗೆ ಕಾಣುವುದಿಲ್ಲ. (ಹೊರಗೆ ಆಡುತ್ತಿರುವ ಉಪೇಂದ್ರನನ್ನು ಕೂಗಿ ಕರೆಯುವನು.) ಮಗು, ಉಪೇಂದ್ರಾ!

**ಉಪೇಂದ್ರ:**– ಏನು ತಾತ! ಏತಕ್ಕೆ ಕರೆದದ್ದು ?

**ಕಶ್ಯಪ:**– ನಿನ್ನ ದುಃಖಿನಿಯಾದ ತಾಯಿಯ ದುಃಖವನ್ನು ಶಮನ ಮಾಡುವುದಿಲ್ಲವೇ ನೀನು ?

**ಉಪೇಂದ್ರ:**– ನಾನು ಭೂಮಿಗಿಳಿದು ಬಂದುದೇ ಅದಕ್ಕಾಗಿ ತಾತ! ಆದರೆ, ಬಲಿರಾಯನು ಮಿಕ್ಕ ದೈತ್ಯರಂತಿಲ್ಲ. ಅವನ ರಾಜ್ಯದಲ್ಲಿ ದಯೆಯಿದೆ, ದಾನವಿದೆ, ಧರ್ಮವಿದೆ! ಮೂರುಲೋಕಗಳಲ್ಲಿಯೂ ಸ್ವರ್ಗಸಮರಾಜ್ಯವನ್ನು ಕಟ್ಟುವೆನೆಂಬ ಅವನ ಬಯಕೆ ಕೈಗೂಡುವುದರಲ್ಲಿದೆ. ಇಂತಹ ದೇವಸಮ-ನಾದ ದೈತ್ಯನನ್ನು ದಮನ ಮಾಡಬೇಕಾದರೆ, ನ್ಯಾಯ್ಯವಾದ ದಾರಿಯಿಂದಲೆ ಮಾಡಲು ಬೇಕಾಗಿದೆ.

**ಕಶ್ಯಪ:**– ಕೇಳಿದೆಯೇ ಉಪೇಂದ್ರನ ಮಾತುಗಳನ್ನು ?

**ಅದಿತಿ:**– ಕೇಳಿದೆ, ಕಿವಿಗೊಟ್ಟು ಮನಗೊಟ್ಟು ಕೇಳಿದೆ; ಆದರೆ ಆ ನ್ಯಾಯ್ಯವಾದ ದಾರಿ ಇನ್ನೂ ದೊರೆತಿಲ್ಲವೇ ಮಗು ?

**ಉಪೇಂದ್ರ:**– ದೊರೆತಿದೆ ತಾಯಿ! ನನಗೆ ಉಪನಯನದ ಸಂಸ್ಕಾರಗಳನ್ನು ಬೇಗನೆ ಮುಗಿಸಿ, ಷಟ್‌ಕರ್ಮಗಳಿಗೂ ನನ್ನನ್ನು ಅಧಿಕಾರಿಯನ್ನಾಗಿ ಮಾಡಿಸಿರಿ! ಧರ್ಮವನ್ನು ಧರ್ಮದಿಂದಲೇ ಜಯಿಸಬೇಕಾಗುವುದು.

**ಅದಿತಿ:**–ಏನು ಬಲಿಯ ದಮನಕ್ಕಾಗಿ ನೀನು ಬ್ರಹ್ಮಚಾರಿಯಾಗಬೇಕೆ?

**ಉಪೇಂದ್ರ:**– ಅಹುದು ದೇವಮಾತೆ! ಬ್ರಹ್ಮಚಾರಿಯಾಗದೆ ದಾನ ಬೇಡುವ ಅಧಿಕಾರ ನನಗೆಲ್ಲಿ ಬರುವುದು ? ಇದು ಭೂಲೋಕ! ಇಲ್ಲಿಯ ಮಾನವಧರ್ಮವನ್ನು ಮೀರಿ ನಡೆಯುವುದು, ಅವತಾರಿ ವಿಭೂತಿಗಳಿಗೂ ಅಧರ್ಮವಾಗಿರುವುದು !

**ಅದಿತಿ:**– ನಿನ್ನ ತಂದೆ ಒಪ್ಪಿದರೆ, ನೀನು ಬೇಗನೆ ಬ್ರಹ್ಮೋಪದೇಶ ಪಡೆಯಬಹುದು !

**ಕಶ್ಯಪ:**– ಅದಕ್ಕಿನ್ನು ವಿಲಂಬವೇಕೆ ದೇವಿ! ಕೂಡಲೇ ಈತನ ಉಪ-ನಯನ ಮಹೋತ್ಸವವನ್ನು ನೆರವೇರಿಸಿಬಿಡೋಣ!

**ಅದಿತಿ:**– ಧನ್ಯಳಾದೆ! ಮಗು, ಉಪೇಂದ್ರಾ! ನೀನೆ ನನ್ನ ಜೀವಿತದ ಆಶೆಗೆ ಆಧಾರ! ನಿನ್ನಿಂದಲೇ ನನ್ನ ದೇವಸಂತಾನದ ಉದ್ಧಾರವಾಗಬೇಕು.

**ವಾಮನ:**– ( ಹಿರಿಯನ ಗಂಭಿರವಾಣಿಯಲ್ಲಿ ) ತಥಾಸ್ತು!

( ಸುರರ ಜಯಜಯಕಾರದ ಧ್ವನಿ. ಸುರದುಂದುಭಿಗಳ ಮಂಗಲ ವಾದ್ಯವಾದನ )

* * * *

## ನಿವೇದಕ

ನರ್ಮದಾತೀರದ ನಿರ್ಮಲವಾದ ಪ್ರದೇಶದಲ್ಲಿ, ಬಲಿಚಕ್ರವರ್ತಿಯ ಯಾಗಶಾಲೆ. ಇದೀಗ ನೂರನೆಯ ಅಶ್ವಮೇಧಯಾಗ ನಡೆದಿದೆ. ( ಆಹುತಿಯ ಮಂತ್ರಗಳು ಹಿನ್ನೆಲೆಯಲ್ಲಿ ಕೇಳುತ್ತಿರಬೇಕು. ) ರಾಷ್ಟ್ರದಲ್ಲಿಯ ವೇದ-ವೇದಾಂಗವಿದರಾದ ಋತ್ವಿಜರೂ, ಅಧ್ವರ್ಯುಗಳೂ, ಹೋತಾರರೂ, ಕ್ರಮಪಾಠಿ-ಜಟಾಪಾಠಿ-ಘನಪಾಠಿಗಳೂ, ಸೂತಪುರಾಣಿಕರೂ ಯಾಗಶಾಲೆ-ಯಲ್ಲಿ ತಮ್ಮ ತಮ್ಮ ಸ್ಥಾನಗಳನ್ನು ಹಿಡಿದು ಕುಳಿತುಕೊಂಡಿದ್ದಾರೆ. ಯಜ್ಞದ ದೈನಂದಿನ ಆಹುತಿಯ ಕಾರ್ಯವು ನಡೆದಿದೆ. ( ಆಹುತಿಯ ಮಂತ್ರಗಳು ಹತ್ತಿರದಿಂದಲೇ ಕೇಳಬೇಕು. ಜೊತೆಗೆ ಸದಸ್ಯರಲ್ಲಿಯ ಗುಣುಗುಣು ಮಾತು ಗಳು ಕೇಳುತ್ತಿರಬೇಕು. ) ಓ! ಇವನಾವ? ಯಾಗಶಾಲೆಯ ಬಾಗಿಲಲ್ಲಿ ಅಭಿನೂತನ ಬ್ರಹ್ಮಚಾರಿ? ಕಟಿಯಲ್ಲಿ ಮೌಂಜಿಯ ಬಂಧನ! ಕೊರಳಲ್ಲಿ ಹೊಸ ಯಜ್ಞೋಪವಿತ! ಬಲದ ಕೈಯಲ್ಲಿ ಕಮಂಡಲು; ಎಡದ ಕೈಯಲ್ಲಿ ಪಾಲಾಶದಂಡ. ಬೆನ್ನಿಗೆ ಗರಿಯ ಸತ್ತಿಗೆ. ಕಂಕುಳಲ್ಲಿ ಕುಶಾಸನ ಬಂದ; ಯಾಗಶಾಲೆಯ ಬಾಗಿಲಲ್ಲಿ ನಿಂದ!

**ಬ್ರಹ್ಮಚಾರಿ:**– ಭಿಕ್ಷಾಂ ದದಾತು ಭವಾನ್!

( ಸದಸ್ಯರಲ್ಲಿ ಆಶ್ಚರ್ಯೋದ್ಗಾರಗಳು. )

**ಒಬ್ಬ:**– ಇವನೆಲ್ಲಿಯ ಕುಳ್ಳ ಬಟುವಯ್ಯಾ!

**ಇನ್ನೊಬ್ಬ:**– ಅಬ್ಬಾ! ಎಂತಹ ತೇಜಸ್ವಿಯಾದ ಮುಖ!

**ಮತ್ತೊಬ್ಬ:**– ಅಮ್ಮಾ, ಎಷ್ಟೊಂದು ಸುಕುಮಾರವಾದ ಮುಖ-ಮುದ್ರೆ?

**ಒಬ್ಬ:**– ವೇಷ ಬದಲಿಸಿದ ಸನತ್ಕುಮಾರನೇನೋ!

**ಇನ್ನೊಬ್ಬ:**– ಅಗ್ನಿಯೇ ಈ ವಟುವೇಷದಿಂದ ಬಂದಿರುವನೇನೊ!

**ಮತ್ತೊಬ್ಬ:**– ಹೈಮವತಿಯನ್ನು ವಂಚಿಸಲು ವಟುವೇಷ ತಳೆದ ಸಾಕ್ಷಾತ್ ಶಂಕರನಂತೆ ಕಾಣುತ್ತಲಿದ್ದಾನೆ.

**ಬ್ರಹ್ಮಚಾರಿ:**– ಭಿಕ್ಷಾಂ ದದಾತು ಭವಾನ್!

( ವಟುವಿನ ಕೂಗು ಬಲಿರಾಜನಿಗೆ ಕೇಳುವುದು. )

**ಬಲಿರಾಜ:**– ಆಚಾರ್ಯರೇ, ಯಾರೋ ಅತಿಥಿಗಳು ಆಗಮಿಸಿದಂತೆ ಕಾಣುವುದು. ಮನ್ನಿಸಿ ಕರೆದು ತರಬೇಕು.

**ಬ್ರಹ್ಮಚಾರಿ:**– ( ಮುಂದುವರಿಯುತ್ತ ) ಇದೋ, ನಾನೇ ಬರುತ್ತ ಲಿದ್ದೇನೆ.....ಮನ್ನಣೆಗಾಗಿ ನಿನ್ನ ಬಳಿ ಬಂದಿಲ್ಲ ದೈತ್ಯರಾಜಾ! ದಾನಕ್ಕಾಗಿ ಬಂದ ಬ್ರಹ್ಮಚಾರಿ ನಾನು!

**ಬಲಿರಾಜ.**– ದಾನದ ಮಾತು ಆ ಮೇಲೆ ನೋಡುವ ವಟುವರ! ಯಾಗಶಾಲೆಗೆ ಬಂದ ಅತಿಥಿಗಳು ನೀವು! ಯಜಮಾನನಾದ ನಾನು ಮೊದಲು ತಮಗೆ ಅರ್ಘ್ಯ-ಪಾದ್ಯಗಳನ್ನು ಸಲ್ಲಿಸಿ, ಅತಿಥಿಪೂಜೆಯನ್ನು ಮಾಡ ಬೇಕಾಗಿದೆ. ಹೂ, ಅರ್ಘ್ಯೋದಕ ಪಾದೋದಕಗಳು ಬರಲಿ! ಪುರೋಹಿತರೇ, ನನ್ನಿಂದ ಅತಿಥಿಯ ಪೂಜೆ ಮಾಡಿಸಿರಿ!

( ವಿಧ್ಯುಕ್ತವಾಗಿ ಅತಿಥಿಪೂಜೆ ನಡೆಯುವುದು. ಬಳಿಕ )

**ಬಲಿರಾಜ:**– ತೇಜಸ್ವಿಯಾದ ಅತಿಥಿಯ ಆಗಮನದಿಂದ ಧನ್ಯನಾದೆ!

**ಬ್ರಹ್ಮಚಾರಿ:**– ದೈತ್ಯರಾಜನಿಗೆ ಶ್ರೇಯಸ್ಸು ಉಂಟಾಗಲಿ!

**ಬಲಿರಾಜ:**– ಅನುಗೃಹೀತನಾದೆನು. ಮಾಣವಕಮೂರ್ತಿ, ತಾವು ಅಪೇಕ್ಷಿಸುವ ದಾನವು ಯಾವುದು? ಈ ದೈತ್ಯರಾಜನ ರಾಜ್ಯದಲ್ಲಿ ಬೇಡಿದವ ರಿಗೆ ಇಲ್ಲವೆನ್ನುವ ಕಾರ್ಪಣ್ಯಕ್ಕೆ ಅವಕಾಶವೇ ಇಲ್ಲ.

**ಬ್ರಹ್ಮಚಾರಿ:**– ಮೂರು ಲೋಕದಲ್ಲಿಯೂ ನಿನ್ನ ರಾಜ್ಯದಲ್ಲಿಯ ದಾನ-ಗುಣದ ಕೀರ್ತಿ ಹೊಗಳಿ ಹಾಡಿಸಿಕೊಳ್ಳುತ್ತಲಿದೆ, ದೊರೆಯೆ! ನಿನ್ನ ಔದಾ-ರ್ಯದ ಬಿರುದನ್ನು ಕೇಳಿಯೆ ನಿನ್ನಲ್ಲಿಗೆ ನಾನು ಧಾವಿಸಿ ಬಂದಿದ್ದೇನೆ.

**ಶುಕ್ರಾಚಾರ್ಯರ್:–** ಬಲಿಚಕ್ರವರ್ತಿ! ಈತ ಸಾಮಾನ್ಯವಟುವಾಗಿ ಕಾಣುವುದಿಲ್ಲ. ಈ ವಾಮನಮೂರ್ತಿಗಾಗಿ ಮುನ್ನೆಚ್ಚರಿಕೆಯಿಂದ ನಡೆದು ಕೊಳ್ಳಬೇಕು ನೀನು!

**ಬಲಿರಾಜ:–** ಗುರುಗಳೇ, ದಾನಬೇಡಲು ಬಂದವನನ್ನು ಅಸಾಮಾನ್ಯ, ಸಾಮಾನ್ಯ ಎಂದು ವಿಂಗಡಿಸುವುದುಂಟೆ? ದಾನಗುಣವೇ ಸಮಾಜಶಾಂತಿಯ ಮೊದಲ ಮೆಟ್ಟಲೆಂದು ನನ್ನ ರಾಜ್ಯದ ಶಾಸನವಿರುವಾಗ, ಆ ಶಾಸನವನ್ನು ಮೀರಿ ರಾಜನಾದ ನಾನೇ ವರ್ತಿಸುವುದು ಸಾಧ್ಯವುಂಟೇ? ಉಚಿತವೆನಿಸೀತೆ?

**ಬ್ರಹ್ಮಚಾರಿ:–** ಭಲೆ! ಬಲಿಚಕ್ರವರ್ತಿಗೆ ಯೋಗ್ಯವಾದ ಮಾತು ಇದು!

**ಶುಕ್ರಾಚಾರ್ಯರ್:–** ರಾಜಾ, ದಾನವನ್ನು ಪಾತ್ರಾಪಾತ್ರವರಿತು ಕೊಡಬೇಕೆಂದೂ ಧರ್ಮನಿಯಮವಿದೆ. ಇದರ ವಿಚಾರ ನಿನ್ನ ಮನದಲ್ಲಿರಲಿ!

**ಬಲಿರಾಜ:–** ಆಗಲಿ! ಹೂಂ, ಬ್ರಹ್ಮಚಾರೀ, ನಿನಗೆ ಬೇಕಾದು-ದೇನು? ದಾಕ್ಷಿಣ್ಯವಿಲ್ಲದೆ ಕೇಳಿಕೊಂಡು ಬಿಡು!

**ಬ್ರಹ್ಮಚಾರಿ:–** ದೈತ್ಯರಾಜಾ! ನನಗೆ ಆಶ್ರಯಕ್ಕೆ ಸ್ಥಳವಿಲ್ಲ. ನನ್ನ ಈ ಕಿರಿಯಡಿಗಳಿಂದ ಮೂರಡಿ ನೆಲವನ್ನು ನನಗೆ ದಾನವಾಗಿ ಕೊಟ್ಟುಬಿಡು! ಇನ್ನೇನೂ ನನಗೆ ಬೇಕಿಲ್ಲ!

**ಬಲಿರಾಜ:–** (ಗಟ್ಟಿಯಾಗಿ ನಕ್ಕು) ಸುಕುಮಾರ ಭಾವಕ್ಕೆ ತಕ್ಕ ಸುಕುಮಾರ ಯಾಚನೆ! ಇದನ್ನು ಬಿಡು ವಟುರಾಜಾ! ಇನ್ನೇನಾದರೂ ಘನವಾದುದನ್ನು ಕೇಳಿಕೊಳ್ಳಬಾರದೆ?

**ಬ್ರಹ್ಮಚಾರಿ:–** ನನಗೆ ಇನ್ನಾವುದರಲ್ಲಿಯೂ ಆಶೆಯಿಲ್ಲ ರಾಜಾ! ಮೂರಡಿ ಭೂಮಿಯನ್ನು ಕೊಟ್ಟುಬಿಡು, ಸಾಕು!

**ಶುಕ್ರಾಚಾರ್ಯರ್:–**ಬಲಿರಾಜಾ! ಏನೋ ಮೋಸಗಾರಿಕೆ ನಡೆಯಲಿದೆ. ಈ ಕವಡುವಟುವಿಗೆ ಯಾವ ದಾನದ ಆಶ್ವಾಸನವನ್ನೂ ಕೊಡಬೇಡ.... ಕೊಡಬೇಡ!

**ಬಲಿರಾಜ:–** ಗುರುಗಳೇ, ನಿಮ್ಮ ಸಂದೇಹಸ್ವಭಾವಕ್ಕಾಗಿ ನಗೆ! ಬರುತ್ತಿದೆ ನನಗೆ! ಈ ನಿರ್ಮಲವಾದ ಮಾಣವಕ, ನನಗೆ ಯಾವ ಮೋಸ

ವನ್ನು ಮಾಡಬಲ್ಲ ? ನಿಮ್ಮ ಈ ಯುಕ್ತಿಯುಕ್ತವಲ್ಲದ ಎಚ್ಚರಿಕೆ, ಈತ ಬೇಡು ವುದನ್ನು ಕೊಡಲೇಬೇಕೆಂಬ ನನ್ನ ತವಕವನ್ನು ಪರಿಪುಷ್ಟಿಗೊಳಿಸುತ್ತಲಿದೆ.

**ಶುಕ್ರಾಚಾರ್ಯ:–** ಕಾಲಕ್ಕೆ ತಕ್ಕಂತೆ ಮತಿಯು ತಲೆದೋರುವುದು ! ದೈತ್ಯರಾಜಾ, ನಾನು ದೈತ್ಯಕುಲದ ಪುರೋಹಿತ. ನನ್ನ ಮುನ್ನೆಚ್ಚರಿಕೆಯ ಮಾತನ್ನು ಕೇಳಲೇ ಬೇಕು !

**ಬಲಿರಾಜ:–** ಗುರುಗಳೇ, ನನ್ನ ಮಹಾಪೌರುಷವನ್ನು ಈ ವಾಮನ ಮೂರ್ತಿ ಮಾಡುವ ಮೋಸ ವಿನಾಶಗೊಳಿಸುತ್ತಿದ್ದರೆ, ಅಂತಹ ಪೌರುಷವನ್ನು ತೆಗೆದುಕೊಂಡು ಮಾಡುವುದಾದರೂ ಏನು ? ಮಾಣವಕ ! ನೀನು ಬೇಡುವ ದಾನಕ್ಕೆ ನನ್ನ ಒಪ್ಪಿಗೆಯಿದೆ !

**ಶುಕ್ರಾಚಾರ್ಯ:–** ರಾಜಾ, ಒಪ್ಪಿಕೊಳ್ಳಬೇಡ, ಮತ್ತೆ ಮತ್ತೆ ಹೇಳು ತ್ತೇನೆ....ಒಪ್ಪಿಕೊಳ್ಳಬೇಡ ... ಬೇಡ, ಬೇಡ !

**ಬಲಿರಾಜ:–** ಉಹುಂ, ಮಾತು ಕೊಟ್ಟಾಯಿತು ; ಇನ್ನು ತಿರುಗಿ-ಸಲು ಶಕ್ಯವೇ ಇಲ್ಲ !

**ಶುಕ್ರಾಚಾರ್ಯ:–** ( ರೋಷಾವೇಶದಿಂದ ) ಶಕ್ಯವೇ ಇಲ್ಲವೇ ? ದೈತ್ಯರಾಜಾ, ಇದರ ಪರಿಣಾಮವೇನು ?....ಪ್ರಳಯ ! ವಿನಾಶ ! ಅನರ್ಥ !

**ಬಲಿರಾಜ:–** ಬಂದದ್ದು ಬರಲಿ ! ಅದನ್ನೆದುರಿಸಲು ತಮ್ಮ ಶಿಷ್ಯ ಸಿದ್ಧ-ನಿದ್ದಾನೆ.

**ಬ್ರಹ್ಮಚಾರಿ:–** ದೊರೆಯೇ, ನಾನು ಕೇಳಿದ ದಾನಕ್ಕೆ ನಿನ್ನ ಒಪ್ಪಿಗೆ ಯಿದ್ದರೆ, ವಿಧಿಪೂರ್ವಕ ಸಂಕಲ್ಪದೊಂದಿಗೆ ಕೊಟ್ಟುಬಿಡು ! ನಾನು ಹೊರಡು ತ್ತೇನೆ.

**ಶುಕ್ರಾಚಾರ್ಯ:–** ( ಸ್ವಗತ ) ಅಯ್ಯೋ ! ದೈತ್ಯರಾಜನಿಗೆ ಒದಗುವ ಅನರ್ಥವನ್ನು ಹೇಗೆ ತಪ್ಪಿಸಲಿ ?

**ಬಲಿರಾಜ:–** ಪುರೋಹಿತರೇ, ಹುಂ, ದಾನಸಂಕಲ್ಪ ಮಾಡಿಸಿರಿ.... ನನ್ನಿಂದ ! ( ಪುರೋಹಿತರು ಸಂಕಲ್ಪ ಮಾಡಿಸುವರು. ಸಂಕಲ್ಪದೊಂದಿಗೆ ಅತಿಥಿಯ ಹಸ್ತದಲ್ಲಿ ನೀರುಬಿಡಲೆಂದು ಕಲಶವನ್ನು ಬೊಗ್ಗಿಸಿದರೆ, ನೀರೇ ಬೀಳಲಿಲ್ಲ. )

**ಪುರೋಹಿತರು:**– ಇದೇನಿದು ? ಕಲಶದಿಂದ ನೀರೇ ಹೊರಕ್ಕೆ ಬರಲೊಲ್ಲದು !

**ಬ್ರಹ್ಮಚಾರಿ:**–ಚಿಕ್ಕ ಬಾಯಿ ; ಏನಾದರೂ ಸಿಕ್ಕಿಕೊಂಡಿದೆಯೇನೋ ! ಸಮಿತ್ತನ್ನು ಒಳಗೆ ಇಕ್ಕಿ ಒತ್ತಿ ನೋಡಿರಿ !

**ಪುರೋಹಿತರು:**– ಹಾಗೆಯೇ ಮಾಡುವೆನು. ( ಕೆಲಹೊತ್ತು ತಡೆದು ) ಅಯ್ಯೋ ! ಇದೇನಿದು ? ಕಲಶದಿಂದ ರಕ್ತಧಾರೆ !

**ಬಲಿರಾಜ:**– ಏನು ? ರಕ್ತಧಾರೆ ? ( ಅತ್ತಿತ್ತ ನೋಡಿ ) ಆಂ ! ಇದೇನು ? ಗುರುಗಳು ಎಲ್ಲಿಯೂ ಕಾಣುತ್ತಿಲ್ಲವಲ್ಲ ! ಒಮ್ಮೆದೊಮ್ಮೆಲೆ ಕಣ್ಮರೆಯಾಗಿದ್ದಾರೆ ? ( ನಸು ತಡೆದು ) ಆಗಲಿ ! ಈ ರಕ್ತಧಾರೆಯನ್ನೇ ನನ್ನ ಸಂಕಲ್ಪಜಲದ ಧಾರೆಯನ್ನಾಗಿ ಮಾಡಿಕೊಳ್ಳುವೆನು. ತೆಗೆದುಕೊಳ್ಳು ಅತಿಥಿ-ರಾಜ, ಮೂರಡಿ ಭೂಮಿಯ ದಾನವನ್ನು ! ( ಒಮ್ಮೆಲೆ ಬಿರುಗಾಳಿಯ ಸಪ್ಪಳ, ಗುಡುಗಿನ ಸಪ್ಪಳ. )

**ಬ್ರಹ್ಮಚಾರಿ:**– ಧನ್ಯ ಧನ್ಯ ಬಲಿರಾಜಾ ! ನಿನ್ನ ಔದಾರ್ಯಕ್ಕೆ ಮೆಚ್ಚಿದೆ....ಮೆಚ್ಚಿದೆ ! ಕೊಡು ಹಾಗಾದರೆ, ನನ್ನ ಅಡಿಗಳಿಂದ ಮೂರಡಿ ದಾನವನ್ನು !

### ನಿವೇದಕ

ಪುಟ್ಟ ವಾಮನಮೂರ್ತಿ ಒಮ್ಮಿದೊಮ್ಮೆಲೆ ಬೆಳೆಯಲು ತೊಡಗಿತು. ಗಿಡದುದ್ದ, ಮರದುದ್ದ, ತಾಳೆಯುದ್ದ, ಯೋಜನದೆತ್ತರ, ನೂರುಯೋಜನ ದೆತ್ತರ, ಬಾನೆತ್ತರ ! ವಾಮನನ ವಿರಾಟ್‌ರೂಪದ ಕಿರೀಟರತ್ನದ ಕಾಂತಿ, ಮುಗಿಲಲ್ಲಿ ಪ್ರತಿಸೂರ್ಯನಂತೆ ಮಿಂಚಲು ತೊಡಗಿದೆ. ಭೂಲೋಕದವರಿಗೆ ಈ ವಿರಾಟ್‌ರೂಪದ ಕೈಯೆಲ್ಲೋ, ಹೊಟ್ಟೆಯೆಲ್ಲೋ, ಮುಖವೆಲ್ಲೋ, ಒಂದೂ ತೋರಲೊಲ್ಲದು. ಎಲ್ಲೆಲ್ಲಿಯೂ ಭೀತಿ-ವಿಸ್ಮಯಗಳ ಗಾಳಿಯೆ ಸುಳಿಯುತ್ತಲಿದೆ ಬಲಿರಾಯನ ಅಚ್ಚರಿಯ ಮುಖ ಮುಗಿಲತ್ತ ನಿಟ್ಟಿಸುತ್ತ ಲಿದೆ ! ಭವಿಷ್ಯದ ಪರಿಣಾಮಕ್ಕಾಗಿ, ಯಾಗಶಾಲೆಯಲ್ಲಿ ಸೇರಿದ ಸಮೂಹ-ವೆಲ್ಲ ಕಾತರಗೊಂಡು ನಿಂತುಬಿಟ್ಟಿದೆ. ಗಟ್ಟಿಯಾಗಿ ಉಸಿರಾಟವಿಲ್ಲ; ಮೈ-ಕೈಗಳ ಅಲುಗಾಟವಿಲ್ಲ. ದೈತ್ಯಗುರು ಶುಕ್ರಾಚಾರ್ಯನೂ ಕಣ್ಣಿಂದ ನೆತ್ತರ

ಧಾರೆ ಸುರಿಸುತ್ತ ವಿಸ್ಮಯಮೌನದಿಂದ ನಿಂತಿದ್ದಾನೆ. ಆಕಾಶದತ್ತಣಿಂದ ವಾಣಿ ಹೊರಡಲು ತೊಡಗಿತು :

**ಆಕಾಶ:**– ಧನ್ಯ ಧನ್ಯ ಬಲಿರಾಜಾ! ನಿನ್ನ ದಿವ್ಯವ್ಯಕ್ತಿತ್ವ, ದೈವೀ-ಶಕ್ತಿಯನ್ನೂ ತೊಡಕಿನಲ್ಲಿ ಕೆಡಹಿತು. ನಾನಾರೆಂಬುದರ ಅಱಿವು ನಿನಗೆ ಆಗಿರಬಹುದು!

**ಬಲಿರಾಜ:**– ಆದಂತಾಗಿದೆ ದೇವಾ! ಇದು ವಂಚನೆಯಲ್ಲವೇ ದೇವಾ ನಿನ್ನದು?

**ಆಕಾಶ:**– ಅದಕ್ಕೇ ಹೇಳಿದೆ ದೈತ್ಯರಾಜಾ, 'ತೊಡಕಿನಲ್ಲಿ ಕೆಡಹಿತು' ಎಂದು. ಇದುವರೆಗಿನ ನನ್ನ ಅವತಾರಕಾರ್ಯಗಳು, ದುಷ್ಟವ್ಯಕ್ತಿಗಳ ಸಂಹಾರಕ್ಕಾಗಿ ಮಾತ್ರ ಆದುವು; ಆದರೆ ಈ ನನ್ನ ಅವತಾರ, ಒಂದೇ ಒಂದು ವ್ಯಕ್ತಿಯಲ್ಲಿಯ ದೌರ್ಜನ್ಯಲೇಶವನ್ನು ಖಂಡಿಸಿ, ಸೌಜನ್ಯಕ್ಕೆ ತಕ್ಕ ಸ್ಥಾನವನ್ನು ಕಲ್ಪಿಸಿಕೊಡುವುದಾಗಿದೆ.

**ಬಲಿರಾಜ:**– ನನ್ನಲ್ಲಿರುವ ದೌರ್ಜನ್ಯಲೇಶವಾವುದು? ಕೇಳಬಹುದೇ ನಾನು?

**ಆಕಾಶ:**– ಅಹಂಕಾರವೇ ಆ ದೌರ್ಜನ್ಯಲೇಶ ಬಲಿರಾಯಾ! ಪೌರು-ಷವು ಒಳ್ಳೆಯ ಆದರ್ಶವನ್ನಿರಿಸಿಕೊಂಡು ಲೋಕಕಲ್ಯಾಣಕ್ಕಾಗಿ ಶ್ರಮಿಸಿದರೂ, ಅದು ವ್ಯಕ್ತಿಯ ಅಹಂಕಾರವನ್ನು ನಷ್ಟಗೊಳಿಸಲಾರದು. ಪೌರುಷವಾದದ ಪ್ರಚಾರ, ವ್ಯಕ್ತಿವ್ಯಕ್ತಿಗಳಲ್ಲಿಯೂ ಅಹಂಕಾರವನ್ನು ಹೆಚ್ಚಿಸುವುದರಿಂದ, ಈ ಈ ಅಹಂಕಾರವೈವಿಧ್ಯಗಳು ಲೋಕದಲ್ಲಿ ವಿಷಮತೆಯನ್ನು ಹೆಚ್ಚಿಸುವುವು. ನಿನ್ನ ಪೌರುಷದ ಕರ್ಮ ಸತ್‌ಕರ್ಮವಾಗಿರಬಹುದಾದರೂ, ಪೌರುಷವಾದದ ನಿನ್ನ ಪ್ರಚಾರ, ಇಂದಲ್ಲದಿದ್ದರೂ ಮುಂದೆ ಲೋಕಕ್ಕೆ ಅಕಲ್ಯಾಣವನ್ನೇ ಉಂಟುಮಾಡುವಂತಹದಾಗಿದ್ದಿತು ಆದುದರಿಂದಲೇ ನಿನ್ನ ಸತ್‌ಕರ್ಮಗಳಿಗಾಗಿ ನಿನ್ನನ್ನು ಪುರಸ್ಕರಿಸಬೇಕು; ನಿನ್ನ ದುಷ್ಕರ್ಮಕ್ಕಾಗಿ ನಿನಗೆ ದಂಡನೆಯಾಗಬೇಕು. ಈ ಎರಡನ್ನೂ ಮಾಡಬೇಕಾಗಿರುವುದರಿಂದ, ನನ್ನ ಇಂದಿನ ಈ ಅವತಾರಲೀಲೆ ನಿನಗೆ ವಂಚನೆಯಾಗಿ ಕಂಡಿದ್ದರೆ ಅದು ಆಶ್ಚರ್ಯವಲ್ಲ!

**ಬಲಿರಾಜ:**– ನನ್ನ ಸತ್‌ಕರ್ಮಗಳಿಗಾಗಿ ನನಗೆ ಸಿಕ್ಕುವ ಫಲವು ಯಾವುದು ?

**ಆಕಾಶ:**– ನೀನಿಂದು ಬಯಸುತ್ತಿರುವ ಅಮರೇಂದ್ರ ಸಿಂಹಾಸನ !

**ಬಲಿರಾಜ:**– ( ಸಂಭ್ರಮದಿಂದ ) ಅಮರೇಂದ್ರ ಸಿಂಹಾಸನ ? ನನಗೆ ಸಿಕ್ಕುವುದೇ ಅದು ?

**ಆಕಾಶ:**– ಹಾಂ ! ಸಿಕ್ಕುವುದು. ಆದರೆ ಈ ಕಲ್ಪದಲ್ಲಲ್ಲ; ಮುಂದಿನ ಕಲ್ಪದಲ್ಲಿ, ದೇವೇಂದ್ರಪದವು ನಿನಗಾಗಿಯೆ ಕಾದಿಟ್ಟದ್ದು !

**ಬಲಿರಾಜ:**– ಅದುವರೆಗೆ ನಾನು ಅದೆಷ್ಟು ಜನ್ಮಗಳನ್ನು ಕಳೆಯುವೆನೇನೋ !

**ಆಕಾಶ:** - ನಿನಗೆ ಜನ್ಮಾಂತರಗಳಿಲ್ಲ ಬಲಿರಾಜಾ ! ನೀನು ಚಿರಜೀವಿ !

**ಬಲಿರಾಜ:**– ( ತೃಪ್ತಿಯ ಸ್ವರದಲ್ಲಿ ) ಆಂ! ನಾನು ಚಿರಜೀವಿಯೆ ? ಹಾಗಾದರೆ 'ಜಾತಸ್ಯ ಮರಣಂ ಧ್ರುವಂ' ಎಂಬ ಧರ್ಮವನ್ನೊಪ್ಪಿದ ಈ ಭೂಲೋಕದಲ್ಲಿ, ಚಿರಜೀವಿತ್ವಕ್ಕೆ ಸ್ಥಾನವಿಲ್ಲವಲ್ಲವೆ ?

**ಆಕಾಶ:**– ಆದುದರಿಂದಲೆ ನಾನು ನಿನ್ನನ್ನು ಸುತಲಲೋಕದ ನಿವಾಸಿಯನ್ನಾಗಿ ಮಾಡಬೇಕೆಂದಿದ್ದೇನೆ. ಹೇಗೂ ನಾನು ಒಂದು ಅಡಿಯಿಂದ ಭೂಮಿಯನ್ನು ಅಳೆದಿದ್ದೇನೆ; ಇನ್ನೊಂದು ಅಡಿಯನ್ನೆತ್ತಿ ಆಕಾಶವನ್ನು ಅಳೆದಿದ್ದೇನೆ. ಈಗ ಮೂರನೆಯ ಅಡಿಗಾಗಿ ಕೆಳಲೋಕವನ್ನು ಅಳೆಯಬೇಕಾಗಿದೆ. ನಿನಗೆ ಇಷ್ಟವಿದ್ದರೆ, ನನ್ನ ಅಡಿಯೊಂದಿಗೆ ಸುತಲಲೋಕಕ್ಕೆ ನಡೆ, ದೈತ್ಯರಾಜಾ !

**ಬಲಿರಾಜ:**– ಜಯ ವಿಶ್ವವ್ಯಾಪಕ ದೇವಶಕ್ತಿ ! ನನ್ನ ಪೌರುಷಕ್ಕಿಂದು ಅಂತರಂಗದ ದೃಷ್ಟಿಗಳನ್ನಿತ್ತೆ ! ನನಗಿನ್ನು ಇಲ್ಲಿದ್ದು ಮಾಡುವುದೇನು ? ನೀನು ಇರಿಸಿದಲ್ಲಿ ಇರುವುದೇ ನನಗೆ ಪರಮಧರ್ಮ !

**ಶುಕ್ರಾಚಾರ್ಯ:**– ಇದೇನು ಮಾತು ಬಲಿರಾಜಾ ? ನನಗೆ ಗತಿಯಾರಿನ್ನು ? ನನ್ನ ನಾಸ್ತಿಕವೇದಾಂತವನ್ನು, ನಿನ್ನ ನಾಸ್ತಿಕ ಕ್ಷಾತ್ರಬಲದ ನೆರವಿನಿಂದ ಪಸರಿಸಿ, ಲೋಕಕ್ಕೆ ಹೊಸ ಪಾಠ ಕಲಿಸಬೇಕೆಂದು ಹಂಬಲಿಸಿದ್ದೆ. ನೀನು ಹೊರಟೆ ! ನನಗಿನ್ನೇನು ಗತಿ ?

**ಬಲಿರಾಜ:**– ಎಲ್ಲರಿಗೂ ಗತಿಯಾದ ಆ ವಿಶ್ವಶಕ್ತಿಯನ್ನೇ ಕೇಳಿರಿ!

**ಆಕಾಶ:**– ಬಲಿರಾಯಾ! ಹಾಗಾದರೆ ಸಿದ್ಧನಾಗು! ಇದೋ, ನನ್ನ ವಿರಾಟ್‌ಸ್ವರೂಪದ ಅಡಿಯನ್ನು ನಿನ್ನ ಮುಡಿಯ ಮೇಲಿಡುತ್ತೇನೆ; ತಡೆದು ಕೊಳ್ಳು!

**ಬಲಿರಾಜ:**– ( ದೂರ ದೂರಕ್ಕೆ ಕೇಳಗಿಳಿಯುವ ಧ್ವನಿಯಲ್ಲಿ ) ಎಂತಹ ಸುಖವಾದ ಸ್ಪರ್ಶವಿದು! ಹಂಸತೂಲಿಕೆ....ಅರಳುಮಲ್ಲಿಗೆ....ರಮಣಿಯರ ಮೈಸೋಂಕು....ಬೆಳುದಿಂಗಳ ತಂಪು! ಓ! ಎಲ್ಲವನ್ನೂ ಮೀರಿನಿಂತ ಮಧುರ ಸ್ಪರ್ಶ! ಬಲೀ, ಧನ್ಯ ಧನ್ಯ! ನೀನಿಂದು ಧನ್ಯ! ಇಂದಿನ ಕಾರ್ತಿಕ ಶುಕ್ಲ ಪ್ರತಿಪದೆಯ ಶುಭತಿಥಿಯಲ್ಲಿ, ನಿನಗೆ ನಿಜವಾದ ತಿಳಿವಿನ ಉದಯವಾಯಿತು! ಎಂತಲೆ ಇಂದು ಇದು, ನಿನ್ನ ಜನ್ಮದಿನ! ಜಯಂತಿ!

( ವಿವಿಧ ವಾದ್ಯಗಳು ಮೊಳಗುವವು. )

( ಅನೇಕ ಧ್ವನಿಯಲ್ಲಿ ಜಯಜಯಕಾರ )

" ಜಯ ಬಲಿಚಕ್ರವರ್ತಿ! ಧನ್ಯ ಪಾವನ ಮೂರ್ತಿ "

**ಬಲಿರ್ವಿಭೀಷಣೋ ಭೀಷ್ಮಃ**
**ಪ್ರಲ್ಹಾದೋ ನಾರದೋ ಧ್ರುವಃ**
**ಏತೇಷಾಂ ಸ್ಮರಣಾನ್ನಿತ್ಯಂ**
**ಮಹಾಪಾತಕನಾಶನಂ! ||**

**ಶಾಂತಿಃ ಶಾಂತಿಃ ಶಾಂತಿಃ!**

---

# ಅಮೃತಾತ್ಮ

( ಸಾಂದರ್ಭಿಕ ರೂಪಕ )

## ಪಾತ್ರಪರಿಚಯ

| | |
|---|---|
| ನಿರೂಪಕ | ನಾಟಕದ ಸೂತ್ರಧಾರ |
| ವೇದಾಂತಿ | ವಿಶ್ವದ ವೇದಾಂತದ ಪ್ರತಿನಿಧಿ |
| ಕಾಲಪುರುಷ | ಅನಾದ್ಯನಂತ ಜ್ಞಾನಶಕ್ತಿ |
| ಭಾರತಮಾತೆ | ಭರತರಾಷ್ಟ್ರದ ಅಭಿಮಾನದೈವತ |
| ಮೃತ್ಯುದೇವ | ಋತಶಕ್ತಿಯ ದೂತ |

ಅಲ್ಲದೆ ಬೇರೆ ಬೇರೆ ಪ್ರಸಂಗಗಳಲ್ಲಿ ಬರುವ ಜನಜಂಗುಳಿಗಳು.



## ಕಾಲ

ಅಧುನಿಕ ಭಾರತದ ಸ್ವಾತಂತ್ರ್ಯಸಾಧನೆಯ ತರುವಾಯ.

 

## ಧ್ವನಿಸೂಚನೆಗಳು

ಕಾಲಪುರುಷನ ಹಾರಿಕೆ, ರಾಮಧೂನ್, ಗುಂಡಿನ ಸಪ್ಪುಳ,

ಜನಜಂಗುಳಿಯ ಕೂಗುಗಳು.




# ಅಮೃತಾತ್ಮ



( ಅಂತರೀಕ್ಷದಲ್ಲಿ ಮಂತ್ರಧ್ವನಿ)

**ಓಂ ಪೂರ್ಣಮದಃ ಪೂರ್ಣಮಿದಂ**
**ಪೂರ್ಣಾತ್ ಪೂರ್ಣಮುದಚ್ಯತೇ।**
**ಪೂರ್ಣಸ್ಯ ಪೂರ್ಣಮಾದಾಯ**
**ಪೂರ್ಣಮೇವಾವಶಿಷ್ಯತೇ ॥**

**ವೇದಾಂತಿ:-** ಪರಿಪೂರ್ಣಳಾದ ವಿಶ್ವಶಕ್ತಿಗೆ ನಮೋನಮಃ! ಯಾವಾಗಲೂ ಎಲ್ಲ ರೀತಿಯಿಂದಲೂ ಪರಿಪೂರ್ಣವಾಗಿರುವ ಈ ದೈವಸೃಷ್ಟಿಯಲ್ಲಿ, ಕೊರತೆಯೆಂಬುದಕ್ಕೆ ಅವಕಾಶವೆಲ್ಲಿದೆ ? ಆದರೆ ಪೂರ್ಣತೆಯನ್ನು ಕಾಣುವ ಒಳಗಣ್ಣು ಮುಚ್ಚಿದವರಿಗೆ, ಈ ಸೃಷ್ಟಿ ದ್ವಂದ್ವಮಯವಾಗಿ ಕಾಣುವುದು. ಈ ದ್ವಂದ್ವದ ದರ್ಶನವೇ, ಇಲ್ಲದ ಕೊರತೆಗಳ ಅಭಾಸವನ್ನುಂಟುಮಾಡುವುದು. ಇಂತಹ ಆಭಾಸವೇ ಚೇತನಗಳ ಇಷ್ಟ–ಅನಿಷ್ಟಗಳಿಗೆ ಕಾರಣವಾಗಿ ನಿಲ್ಲುವುದು. ಈ ಇಷ್ಟ–ಅನಿಷ್ಟಗಳೇ ಚೇತನಗಳನ್ನು ಕಾಮ-ಕ್ರೋಧಾದಿ ಮನೋವಿಕಾರಗಳ ಕೈಗೆ ಒಪ್ಪಿಸುವುದು. ಮನೋವಿಕಾರಗಳ ವಶವಾದ ಜೀವಗಳು, ತಮ್ಮ ಪೂರ್ಣತೆಯನ್ನು ಕಳೆದುಕೊಂಡು,ಸೃಷ್ಟಿಯಲ್ಲಿ ಇಲ್ಲದ ಗೊಂದಲ ಕಲಹಗಳನ್ನು ಎಬ್ಬಿಸಿಕೊಂಡು, ಜೀವನದ ಅಶಾಂತಿಗೆ ಕಾರಣವಾಗುವುವು. ಇದೆಲ್ಲ ವೇದಾಂತ-ವೇದ್ಯ ಸತ್ಯವಾದರೂ, ಇದನ್ನು ತಿಳಿದುಕೊಂಡು ನಡೆಯುವ ಚೇತನಗಳೇ ಅಪರೂಪವಾಗಿವೆ! ವಿಶ್ವದ ಶಾಂತಿಗೆ, ವೇದಾಂತವನ್ನು ಬಿಟ್ಟರೆ ಇನ್ನೊಂದು ಉಪಾಯವೇ ಇಲ್ಲ. ಆದರೆ........!

( ಭರ್‍ರೆಂದು ಗಂಭೀರವಾದ ಸದ್ದು ಕೇಳುವುದು. )

ಓ! ಇದೇನು ಸದ್ದಿದು! ಅಬ್ಬಾ, ಅಂತರೀಕ್ಷದಲ್ಲಿ ಹಾರುತ್ತ ಬರುತ್ತಲಿರುವ ಶಕ್ತಿ ಇದಾವುದು? ಓ! ಮೇಘಶ್ಯಾಮನಾದ ಮಹಾಪುರುಷ! ಮನೋಹಾರಿಯಾದ ಗಾತ್ರ; ಸರ್ವದೇಶ-ಸರ್ವಕಾಲಗಳನ್ನೂ ಒಮ್ಮೆಲೇ ನಿಟ್ಟಿಸಿ ಗೃಹಿಸಬಹುದಾದ ಉಜ್ವಲನೇತ್ರ! ಮನೋವೇಗದಿಂದ ಎಲ್ಲಿ ಬೇಕಲ್ಲಿಗೆ ಹಾರಬಲ್ಲ ರಭಸದ ರೆಕ್ಕೆಗಳು! ಇದೋ, ಇಲ್ಲಿಗೇ ಬಂದ!

( ಭರ್‍ರೆಂದು ಹಾರುವ ಸಪ್ಪುಳ ತಟ್ಟನೆ ನಿಲ್ಲುವುದು. ಹಾಡು ಕೇಳಿಸತೊಡಗುವುದು. )

**ಹಾಡು :**

ನಿತ್ಯಜಾಗೃತ ನಾನು, ನಿತ್ಯಸಾಕ್ಷಿಯು ನಾನು,
ಸತ್ಯದ ನೆಲೆಯ ಕಂಡವನು!
ಬಿತ್ತರಿಸುತಲಿಹೆ ಮೌನಭಾಷೆಯುಲದನು,
ಕತ್ತಲು ಬೆಳಕಿಲ್ಲದವನು!
ನಿಯತಿಯ ನಿಜದೂತ ನಾನು!
ಪ್ರಕೃತಿಯ ಸಹಕಾರಿ ನಾನು! ॥ ೧ ॥

**ವೇದಾಂತಿ:**– ಇವನಾವನಯ್ಯಾ? ಸತ್ಯದ ನೆಲೆಯನ್ನು ಕಂಡವನಂತೆ; ಕತ್ತಲೂ ಬೆಳಕೂ ಇಲ್ಲದವನಂತೆ, ನಿಯತಿಯ ನಿಜದೂತನಂತೆ! ಯಾರೋ, ಕೇಳಿಯೇ ನೋಡುವೆನು. ಎಲೈ ದಿವ್ಯಪುರುಷಾ, ನೀನಾರು? ನಿನ್ನ ಸಂದರ್ಶನ, ನನ್ನ ಕಣ್ಮನಗಳನ್ನು ಆಕರ್ಷಿಸಿಕೊಂಡುಬಿಟ್ಟಿದೆ. ನೀನು ಯಾರೆಂಬುದನ್ನು ತಿಳಿದುಕೊಳ್ಳಬಹುದೇ ನಾನು?

**ಕಾಲಪುರುಷ:**– ಅಯ್ಯಾ, ನಾನು ನಿಮ್ಮ ಕಣ್ಣಿಗೆ ಕಾಣುತ್ತಿರುವೆನೆ? ಹಾಗಿದ್ದರೆ, ನೀವೂ ದಿವ್ಯದೃಷ್ಟಿಯವರಾಗಿ ಇದ್ದಂತಾಯಿತು. ನಿಮಗೆ ನನ್ನ ಪರಿಚಯ ಚೆನ್ನಾಗಿ ಆಗುವುದು ಅವಶ್ಯ! ಸ್ವಾಮಿ, ಕಾಲಪುರುಷನೆಂಬವನು ನಾನೇ! ಲೋಕದ ಆಗು-ಹೋಗುಗಳಿಗೆಲ್ಲ ಅನುವು ಮಾಡಿಕೊಡುತ್ತ, ಆಗುವುದನ್ನೆಲ್ಲ ಸಾಕ್ಷೀಭೂತನಾಗಿ ನೋಡುತ್ತ ಸುತ್ತುತ್ತಿರುವುದು ನನ್ನ ಕರ್ತವ್ಯ. ವಿಶ್ವದ ಋತಶಕ್ತಿ ನನಗೆ ಒಪ್ಪಿಸಿಕೊಟ್ಟ ಕಾರ್ಯವಿದು!

**ವೇದಾಂತಿ:**– ಆಹಾ ! ನೀನು ಕಾಲಪುರುಷನೇ ? ನಿನಗೆ ನಮಸ್ಕಾರ ಮಹಾತ್ಮಾ !

**ಕಾಲಪುರುಷ:**– ನೀವಾರೆಂಬುದನ್ನು ನಾನು ಕಂಡುಕೊಳ್ಳದೆ ಇಲ್ಲ ವೇದಾಂತಿಗಳೆ ! ಜಗತ್ತಿನ ದ್ವಂದ್ವಭಾವವನ್ನು ಕಳೆದು, ಎಲ್ಲೆಲ್ಲಿಯೂ ಸಮತೆ-ಶಾಂತಿಗಳನ್ನು ಹರಡಬೇಕೆಂದು ಹವಣಿಸುವವರು ನೀವು ! ಒಮ್ಮೆಲೆ ಜಗತ್ತನ್ನು ಪೂರ್ಣತೆಗೆ ಒಯ್ಯಬೇಕೆಂದು ಪ್ರಯತ್ನಿಸುವವರು ! ಅದ-ಕ್ಕಾಗಿ ವೈಖರೀ ವಾಣಿಯಲ್ಲಿ ಉಪದೇಶ-ಉಪನ್ಯಾಸಾದಿಗಳನ್ನು ಕೊಡುತ್ತ ಹೋಗುವವರು ! ಆದರೆ ವೇದಾಂತಿಗಳೆ, ( ಮೆಲುನಗೆ ನಗುತ್ತ ) ಅನಾದಿ ಕಾಲದ ಅನುಭವ ನನ್ನದು ! ನಿಯತಿಮಾತೆಯು ಈ ಲೋಕವನ್ನು— ತನ್ನ ಲೀಲೆಗಾಗಿ—ಶಾಶ್ವತವಾಗಿ ಅಪೂರ್ಣವಾಗಿಸಿ ಇರಿಸಿದ್ದಾಳೆ. ಇದನ್ನು ನಾಯ ಬಾಲದಂತೆ ಡೊಂಕುಡೊಂಕಾಗಿ ಮಾಡಿ ನಿಲ್ಲಿಸಿದ್ದಾಳೆ. ಅಯ್ಯಾ, ಈ ಅಪೂರ್ಣತೆಯನ್ನು ಪೂರ್ಣಗೊಳಿಸಲೆಂದು — ಈ ಲೋಕದ ಡೊಂಕನ್ನು ತಿದ್ದ-ಲೆಂದು—ಮುಂದೆ ಬಂದು ಕಾರ್ಯ ಮಾಡಿದವರು ಎಣಿಕೆಯಿಲ್ಲದಷ್ಟು ಜನರು ! ಆದರೂ ಯಾರಿಂದಲೂ ಅದರ ಡೊಂಕು ತಿದ್ದಲಿಕ್ಕೆ ಸಾಧ್ಯವಾಗಲಿಲ್ಲ; ಸಾಧ್ಯ-ವಾಗುವುದಿಲ್ಲ !

**ವೇದಾಂತಿ:**- ನಿನಗೂ ಭ್ರಮೆಯೇ ಕಾಲಪುರುಷಾ ? ಈ ಜಗತ್ತು ಅಪೂರ್ಣವಾದುದಲ್ಲ; ಪರಿಪೂರ್ಣವಾದುದು ! ಡೊಂಕಾದುದಲ್ಲ, ಸರಲ-ಸುಂದರವಾದುದು !

**ಕಾಲಪುರುಷ:**– ( ನಕ್ಕು ) ಕವಿಗಳ ಕನಸಿನ ಆಶೆಯಿದು; ವೇದಾಂತಿಗಳ ಮನಸಿನ ಮಂಡಿಗೆಯಿದು ! ಸತ್ಯದ ಸಾಕ್ಷಾತ್ಕಾರವಾದವರು ಹೀಗೆಂದೂ ಮಾತನಾಡರು ವೇದಾಂತಿಗಳೆ !

**ವೇದಾಂತಿ:**– ನನ್ನಂತಹ ವೇದಾಂತಿಗೂ ಸತ್ಯದ ಸಾಕ್ಷಾತ್ಕಾರವಾಗಿಲ್ಲ-ವೆಂದು ಹೇಳುವ ನಿನ್ನ ಧೈರ್ಯ ದೊಡ್ಡದು !

**ಕಾಲಪುರುಷ:**– ಇದಕ್ಕೆ ಧೈರ್ಯವೇಕೆ ಬೇಕು ವೇದಾಂತಿಗಳೇ ! ಕಂಡುಂಡ ಸತ್ಯವನ್ನು ಕಂಡಂತೆ ಹೇಳುತ್ತಲಿದ್ದೇನೆ.

**ವೇದಾಂತಿ:**– ಇದು ನಿನ್ನ ಕಂಡುಂಡ ಸತ್ಯವೆ ?

**ಕಾಲಪುರುಷ:**– ಅಹುದು ಸ್ವಾಮಿ! ಅಂತಹ ಸತ್ಯವನ್ನು ನೀವೂ ಕಂಡು ಅನುಭವಿಸಲು ಸಿದ್ಧರಿದ್ದೀರೇನು?

**ವೇದಾಂತಿ:**– ಸತ್ಯದ ನೆಲೆಯನ್ನು ಕಂಡು ಹಿಡಿಯುವುದೇ ನನ್ನ ವೇದಾಂತದ ಗುರಿಯಾಗಿದೆ. ಅದು ಕಂಡ ಸತ್ಯವೇ.... ಜಗತ್ತು ಸಂಪೂರ್ಣವಾಗಿರುವುದೆಂದು, ನಿತ್ಯಸುಂದರವಾಗಿರುವುದೆಂದು!

**ಕಾಲಪುರುಷ:**– ಸರಿ, ವೇದಾಂತಿಗಳೇ, ಇದೀಗ ನನ್ನೊಂದಿಗೆ ಬರುತ್ತೀರಾ? ಸ್ವತಂತ್ರ ಭಾರತದ ದಿಲ್ಲೀನಗರಕ್ಕೆ ಹೋಗೋಣ. ಲೋಕದ ಡೊಂಕನ್ನು ತಿದ್ದಲು ಹೊರಟಿರುವ ದಿವ್ಯಜೀವನವೊಂದನ್ನೂ, ಲೋಕದ ಡೊಂಕಿನ ಶಾಶ್ವತತೆಯನ್ನೂ ನಿಮಗೆ ಕಣ್ಣಾರೆ ತೋರಿಸುತ್ತೇನೆ.

**ವೇದಾಂತಿ:**– ಓ, ಸ್ವತಂತ್ರಭಾರತದ ರಾಜಧಾನಿಗೆ ಬರಬೇಕೆ? ಸಂತೋಷದಿಂದ ಬರುತ್ತೇನೆ ಕಾಲರಾಯಾ! ಭಾರತವೆಂದರೆ ನನಗೆ ತುಂಬ ಅಭಿಮಾನದ ಸ್ಥಾನ! ಏಕೆಂದರೆ:

ದೇವಋಷಿ ಪೂರ್ವಜರುದಾತ್ತ ವೃತ್ತಿಪ್ರಭಾ-
ಭಾವನಾಮೃತವೃಷ್ಟಿಯಿಂ ಬೆಳೆಯುವ–
ಭಾವಿ ಸುಖಸಾಮ್ರಾಜ್ಯವೆಂಬ ಸತ್‌ಫಲಗಳ-
ನ್ನೀವ ಸರ್ವೋತ್ಕೃಷ್ಟ ನಂದನವನಂ!

**ಕಾಲಪುರುಷ:**– ಸಂತೋಷ! ನಡೆಯಿರಿ ಹಾಗಾದರೆ ವೇದಾಂತಿಗಳೆ! ಭಾರತದಲ್ಲಿ ನಿಮ್ಮ ಜಾತಿಯವರು ಆಗಾಗ ತಲೆದೋರುವುದುಂಟು, ನಿಜ! ಇದೋ, ಇಲ್ಲಿ ಬನ್ನಿರಿ! ಹೀಗೆ ನನ್ನ ನಡುವನ್ನು ಹಿಡಿದುಕೊಳ್ಳಿರಿ. ನಾನು ಹಾರುತ್ತೇನೆ. ಹೆದರಬೇಡಿರಿ ಮತ್ತೆ!

**ವೇದಾಂತಿ:**– ವೇದಾಂತಿಗಳು ನಿರ್ಭೀತರು; ಇದನ್ನು ನೀನು ಅರಿಯೆಯಾ? ಇದೋ, ನೀನು ಹೇಳಿದಂತೆ ನಿನ್ನ ನಡುವನ್ನು ಹಿಡಿದಿದ್ದೇನೆ. ಬೇಕಾದ ಹಾಗೆ ಹಾರು!

( ಭರ್ರೆಂಬ ಸಪ್ಪಳೊಂದಿಗೆ ಕಾಲಪುರುಷನು ಹಾರುವನು )

## ನಿರೂಪಕ

ಇದೀಗ ಭಾರತದ ರಾಜಧಾನಿ ದಿಲ್ಲೀ ನಗರ. ಭಾರತಕ್ಕೆ ಬಂದ ಸ್ವಾತಂತ್ರ್ಯ, ದಿಲ್ಲಿಯ ಜೀವನದಲ್ಲೆಲ್ಲ ನೂತನ ಉತ್ಸಾಹ-ಆಶೆಗಳನ್ನು ತುಂಬಿ ಬಿಟ್ಟಿದೆ ೧೯೪೮ರ ಜನವರಿ ಮೂವತ್ತನೆಯ ದಿನಾಂಕದ ಸಾಯಂಕಾಲ. ನಗರದಲ್ಲಿಯ ಬಿರ್ಲಾಭವನದ ಪ್ರಾರ್ಥನಾಂಗಣದಲ್ಲಿ ಅಸಂಖ್ಯ ಜನಸಮೂಹ ಕುಳಿತು, ಮಹಾತ್ಮಾ ಗಾಂಧೀಜಿಯವರ ಆಗಮನದ ದಾರಿಯನ್ನು ಕುತೂಹಲದಿಂದ ಕಾಯುತ್ತಲಿದೆ. ( ಜನರ ಗದ್ದಲದ ಘೋಷ· ದೂರದಿಂದ ಕೇಳುತ್ತಿರುವ 'ರಘುಪತಿರಾಘವ ರಾಜಾರಾಮ, ಪತಿತಪಾವನ ಸೀತಾರಾಮ' ಎಂಬ ಭಜನೆಯ ಇಂಪಾದ ಶ್ರುತಿ. ) ಎಲ್ಲೆಲ್ಲಿಯೂ ಬಾಪೂಜಿಯವರ ದರ್ಶನದ ಆಶೆಯ ದೃಷ್ಟಿಗಳು! ( ಭರ್ರೆಂಬ ಕಾಲಪುರುಷನ ಹಾರುವ ಗರಿಗಳ ಸದ್ದು ) ಅದೋ, ಕಾಲ-ಪುರುಷ ಅದೃಶ್ಯರೂಪದಲ್ಲಿ ವೇದಾಂತಿಯನ್ನು ತಂದು ಇಲ್ಲಿಯೇ ಇಳುಹಿ, ಒಂದೆಡೆಯಲ್ಲಿ ನಿಲ್ಲಿಸಿದ.

**ವೇದಾಂತಿ:**– ಕಾಲರಾಯಾ, ನಿನ್ನೊಂದಿಗಿನ ಪ್ರಯಾಣದ ಅನುಭವ ವಿಲಕ್ಷಣವಾದುದು. ನಿನ್ನ ರಭಸದ ವೇಗ, ಆಗಾಗ, ನನ್ನಂತಹ ನಿರ್ಭೀತನ ಎದೆಯನ್ನೂ ದಡಗುಟ್ಟಿಸುತ್ತಲಿತ್ತು. ಇದೇ ಭಾರತದ ರಾಜಧಾನಿ–ದಿಲ್ಲೀ ನಗರವೇ ?

**ಕಾಲಪುರುಷ:**– ಅಹುದು, ಸ್ಥಿತಪ್ರಜ್ಞರೆ! ಇದೇ ದಿಲ್ಲೀ ನಗರ. ನಾವೀಗ ಬಂದು ನಿಂತುದು ಮಹಾತ್ಮಾ ಗಾಂಧೀಜಿಯವರ ಪ್ರಾರ್ಥನಾರಂಗ ಸ್ಥಳ. ಮಹಾತ್ಮರು ಇಲ್ಲಿ ನಿತ್ಯವೂ ಸಾರ್ವಜನಿಕವಾಗಿ ಪ್ರಾರ್ಥನೆ ನಡೆ-ಯಿಸುವರು. ಪ್ರಾರ್ಥನೆಯ ಕೊನೆಯಲ್ಲಿ, ಲೋಕದ ಡೊಂಕ ತಿದ್ದುವ ಉತ್ಕಟಭಾವನೆಯಿಂದ, ನಿಮ್ಮಂತೆಯೆ ವೇದಾಂತಬೋಧಕವಾದ ಉಪನ್ಯಾಸಗಳನ್ನೂ ಮಾಡುವರು!

**ವೇದಾಂತಿ:**–ಹಾಂ! ನಿತ್ಯವೂ ನಡೆಯುವುದೇ ಈ ಪ್ರಾರ್ಥನೆ, ವೇದಾಂತ ಬೋಧನೆ? ಜನರಲ್ಲಿ ಎಂತಹ ಶ್ರದ್ಧೆ ತಲೆದೋರಿದೆ ನೋಡು! ಇಂತಹ ಜನರ ಅಸ್ತಿತ್ವದಿಂದಲೇ ಜಗತ್ತಿನ ಪೂರ್ಣತೆಯ ಅನುಭವವು ಎಲ್ಲರಿಗೂ ಬರಲು ತೊಡಗುವುದು. ಧನ್ಯ ಮಹಾತ್ಮಾ ಗಾಂಧೀಜಿ! ಧನ್ಯ ಭಾರತಧರಿತ್ರೀ !

**ಕಾಲಪುರುಷ:–** ಮಹಾತ್ಮರೇನೋ ಧನ್ಯರೇ ಅಹುದು! ಆದರೆ, ಅವರೊಬ್ಬರು ಏನನ್ನು ಮಾಡಬಲ್ಲರು? ಜಗತ್ತು ನಾಯಬಾಲವೆಂದು ಹೇಳಿದೆನಲ್ಲವೆ? ಅದರ ಡೊಂಕನ್ನು ತಿದ್ದಲು ಇವರು ಒಮ್ಮೆ ಬಿಹಾರಕ್ಕೆ ಹೋಗಬೇಕು; ಇನ್ನೊಮ್ಮೆ ಮೂಡಣ ಬಂಗಾಲಕ್ಕೆ ಹೋಗಬೇಕು. ಅಲ್ಲಿಯ ಡೊಂಕ ತಿದ್ದುತ್ತಿರುವಾಗ, ದಿಲ್ಲಿಯ ಡೊಂಕು ಬಲಿಯಿತು! ಇಲ್ಲಿಗೆ ಬಂದು ತಿದ್ದಲು ತೊಡಗಿದ್ದಾರೆ! ( ಒಮ್ಮೆಲೆ ಜನರ ಗುಲ್ಲು-ಸೊಲ್ಲು ಕೇಳಲು ತೊಡ ಗುವುದು. ) ಅದೋ, ಅಲ್ಲಿ ನೋಡಿರಿ....ವೇದಾಂತಿಗಳೆ! ಅದೋ....ಅಲ್ಲಿ....! ಇಬ್ಬರು ಹೆಣ್ಣುಮಕ್ಕಳ ಹೆಗಲ ಮೇಲೆ ಕೈಯಿರಿಸಿಕೊಂಡು, ತುಟಿಗಳಲ್ಲಿ ಅಮೃತಸ್ಮಿತವನ್ನು ತುಂಬಿಕೊಂಡು, ಮೆಲ್ಲಡಿಯಿಂದ ಬರುತ್ತಿರುವವರೇ ಮಹಾತ್ಮಾ ಗಾಂಧಿ! ಇಂದು ಪ್ರಪಂಚವೇ ಇವರ ವೇದಾಂತಬೋಧೆಯನ್ನು ಕೊಂಡಾಡಿ ಕೊನೆಯುತ್ತಲಿದೆ.

**ವೇದಾಂತಿ:–** ( ಶ್ರದ್ಧೆ ತುಂಬಿದ ಧ್ವನಿಯಲ್ಲಿ ) ನಮೋ ನಮೋ ಮಹಾತ್ಮಾ ಗಾಂಧೀಜಿ!

( ಕೂಡಿದ ಜನರಲ್ಲಿ ಗದ್ದಲ-ಗಜಿಬಿಜಿ: 'ಬಾಪೂಜೀ ಅರಹೇ ಹೈಂ!' 'ಮಹಾತ್ಮಾಜೀ ಆಗಯೇ!' )

**ಕಾಲಪುರುಷ:–** ಮಹಾತ್ಮಾಜಿಯವರು ಪ್ರಾರ್ಥನಾ ಪೀಠವನ್ನೇರಿದ ಮೇಲೆ, ಇನ್ನು ಪ್ರಾರ್ಥನೆ ಪ್ರಾರಂಭವಾಗುವುದು. ಇದೇನಿದು? ಮಧ್ಯದಲ್ಲಿಯೆ ಅದಾವನೋ ತರುಣ, ಬಾಪೂಜಿಯನ್ನು ತಡೆದ........

**ವೇದಾಂತಿ:–** ಓ! ಅವನು ಆ ಮಹಾತ್ಮನ ಅಡಿಮುಟ್ಟಿ ನಮಸ್ಕರಿಸಿದ! ಆತ ಎಂತಹ ಶ್ರದ್ಧಾವಂತನಿದ್ದಾನೆ ನೋಡು, ಕಾಲರಾಯಾ!

( ಮಾತಿನ ಕೊನೆಯಕ್ಷರದೊಂದಿಗೆ ಕರ್ಣಕಠೋರವಾದ ಗುಂಡು ಹಾರಿದ ಶಬ್ದ ಕೇಳುವುದು. ಕೂಡಲೆ 'ಹಾ ರಾಮ! ಹಾ ರಾಮ!' ಎಂಬ ಶಾಂತಿಮಯ ಉದ್ಗಾರ ತಲೆದೋರಿ ಅಡಗುವುದು. ಒಮ್ಮೆಲೆ ಎಲ್ಲೆಲ್ಲಿಯೂ ಆರ್ತನಾದ; ಕೂಗು–ಕಿರುಚುಗಳು; 'ಅಯ್ಯೊ, ಮಹಾತ್ಮರ ಕೊಲೆ!' 'ಶಿವ ಶಿವಾ! ಮಹಾತ್ಮರಿಗೆ ಗುಂಡಿನೇಟು' 'ಭಾರತ ಮಾತೆಯ ದುರ್ದೈವ!' )

( ಹೆಣ್ಣಿನ ಕಂಠದಲ್ಲಿ ಶೋಕಧ್ವನಿ )

"ಅಯ್ಯೊ, ನನ್ನ ದುರ್ದೈವವೇ! ಮಹಾತ್ಮನ ಕೊಲೆಯೆ? ಮೋಹನ ಕುಮಾರಾ, ನನ್ನ ಮುದ್ದು ಕಂದಾ! ನೀನೂ ಹಿಂಸೆಗೆ ಗುರಿಯಾಗಬೇಕೆ?

ನಿನ್ನಂತಹ ಅಜಾತಶತ್ರುವಿಗೂ ಶತ್ರುಗಳೇ? ನಿನ್ನಂತಹ ಅಹಿಂಸಾಮೂರ್ತಿಗೂ ಹಿಂಸೆಯ ಬಾಧೆಯೇ? ನೂರಾರು ವರ್ಷಗಳಿಂದಲೂ ಪರದಾಸ್ಯದ ಪಾಶಕ್ಕೆ ಸಿಕ್ಕಿ ಪತಿತಳಾಗಿ ಹೋಗಿದ್ದ ಈ ಭಾರತಿಯನ್ನು ಉದ್ಧರಿಸಿ, ಸ್ವತಂತ್ರಳನ್ನಾಗಿ ಮಾಡಿದೆ;.... ನನ್ನ ಮಕ್ಕಳನ್ನೆಲ್ಲ ತಲೆಯೆತ್ತಿ ನಿಲ್ಲುವಂತೆ ಮಾಡಿದೆ;.... ಮುನ್ನಿನ ನನ್ನ ವೈಭವದ ರಾಜಮುಕುಟವನ್ನು ನನ್ನ ತಲೆಯ ಮೇಲೆ ಏರಿಸಿದೆ! ಇವೆಲ್ಲ ಮಹಾಕಾರ್ಯಕ್ಕೆ ನಿನಗೆ ದೊರೆತ ಪ್ರತಿಫಲವೇನು ಬಾಪೂ? ದಾರುಣವಾದ ಹಿಂಸೆ! ಕೃತಘ್ನತನದ ಕೊಲೆ....! ಅಯ್ಯೋ, ಮಹಾತ್ಮಾ....! ಪವಿತ್ರ ಚರಿತ್ರಾ....! ಮೋಹನದಾಸಾ!"

**ವೇದಾಂತಿ:**–ಇದೇನು ಭೀಕರ ದೃಶ್ಯವಯ್ಯಾ ಕಾಲರಾಯಾ? ಇಂತಹ ಮಹಾತ್ಮನಿಗೂ ಈ ಬಗೆಯ ದುರ್ಮರಣವೇ?

**ಕಾಲಪುರುಷ:**– ಸೃಷ್ಟಿಯ ಅಪೂರ್ಣತೆಗೂ ಡೊಂಕುತನಕ್ಕೂ ಇದೊಂದು ಪ್ರತ್ಯಕ್ಷ ಪ್ರಮಾಣ ವೇದಾಂತಿಗಳೇ!

**ವೇದಾಂತಿ:**– (ಸಂದಿಗ್ಧ ಸ್ವರದಲ್ಲಿ) ಅಯ್ಯೋ, ಲೋಕದ ಭ್ರಮೆಯೆ! ಈ ಡೊಂಕನ್ನು ತಿದ್ದುವುದು ವೇದಾಂತಕ್ಕೂ ಸಾಧ್ಯವಿಲ್ಲವೆ? ಮುಂದೇನು ಗತಿ?

(ಭಾರತಮಾತೆಯ ಕರುಣಾಕ್ರಂದನ)

ಅಕಟಾ! ಮುಂದೇನು ಗತಿ? ನನ್ನ ಜನತೆಯನ್ನು ತಾರಿಸುವ ನಂಬುಗೆಯಿದ್ದ ನೌಕೆ ನಡುಗಡಲಲ್ಲಿ ಮುಳುಗಿ ಹೋಯ್ತು....! ಇನ್ನೂ ಇದೀಗ ಕಣ್ಣು ಬಿಡುತ್ತಲಿದ್ದ ರಾಷ್ಟ್ರಪುರುಷನಿಗೆ ದಾರಿದೋರಲಿದ್ದ ಧ್ರುವತಾರೆ, ಇದ್ದು ದಿದ್ದ ಹಾಗೆ ಮಾಯವಾಯ್ತು! ದೇವಾ, ನನ್ನ ಭಾಗ್ಯವಿಧಾತಾ, ಅಧ್ಯಾತ್ಮ-ಮಯಿಯಾಗಿರುವ ಭಾರತದ ಅಭಿಮಾನಿಯಲ್ಲವೇ ನೀನು? ನನಗಿನ್ನು ತಾರಕರು ಯಾರು....ಭೋ, ತಾರಕರು ಯಾರು?"

(ಆಕಾಶದತ್ತಣಿಂದ ಧ್ವನಿಯೊಂದು ಕೇಳಿಸುವುದು.)

"ತಾಯೆ, ಅಳದಿರು! ಮರೆಯಾದುದು ನನ್ನ ಶರೀರ ಮಾತ್ರ, ನನ್ನ ಆತ್ಮಶಕ್ತಿ ಭಾರತದಲ್ಲೆಲ್ಲ ಸಂಚರಿಸುತ್ತಲಿದೆ. ನನ್ನ ಒಡನಾಡಿಗಳಾದ ವಲ್ಲಭಭಾಯಿ-ಜವಾಹರಲಾಲರನ್ನು ನಿನ್ನ ಒಳಗಣ್ಣಿನಿಂದ ನೋಡು! ನನ್ನ ಶಕ್ತಿ-ತೇಜಗಳನ್ನು ಅವರಲ್ಲಿ ಎರಕ ಹೊಯ್ದಿದ್ದೇನೆ. ವ್ಯಥೆ ಬೇಡ ತಾಯೇ!

ನೀನು ಲೋಕವಂದ್ಯಳಾಗುವೆ....! ನಿನ್ನ ಬೆಳಕು ಪೂರ್ವ-ಪಶ್ಚಿಮಗಳಲ್ಲಿಯೂ ಹರಡುವುದು! ವಂದೇ ಮಾತರಂ!"

**ವೇದಾಂತಿ:–** ವೇದಾಂತಗಂಗಾತರಂಗಿಣಿಯನ್ನು ನಿರಂತರವೂ ಹರಿಸ ಬಲ್ಲ ಭಾರತಮಾತೆ! ನೀನು ದುಃಖಿಸಲಾಗದು. ಸುಖ-ದುಃಖಗಳನ್ನು ನೀನು ಅನಾಸಕ್ತಭಾವದಿಂದ ನೋಡುತ್ತಲಿದ್ದರೆ, ನಿನಗೂ ನಿನ್ನ ಮಕ್ಕಳಿಗೂ ಸಂಪೂರ್ಣತೆಯ ಆನಂದ ಕಟ್ಟಿಟ್ಟದ್ದು!

**ಕಾಲಪುರುಷ:–** ತಾಯೆ, ನನ್ನೊಂದಿಗೆ ಹಲವು ಕಾಲದಿಂದಲೂ ಬಾಳಿ-ರುವ ನೀನು ಎಷ್ಟೊಂದು ಸುಖ-ದುಃಖಗಳ ಚಕ್ರದಲ್ಲಿ ಸಿಕ್ಕಿಲ್ಲ? ನಿನ್ನ ಲೋಕಾನುಭವ ಅನಂತವಾದುದು ದೇವೀ! ನಿನ್ನ ಈ ದುಃಖದ ಬಸಿರಿಂದ, ಮುಂಬರುವ ಕಾಲದ ಮೇಲ್ಮೆ ಮೂಡಿ ಬರುವುದರಲ್ಲಿದೆ....ಶಾಂತಳಾಗು ತಾಯಿ!

(ಭಾರತಮಾತೆಯು ನಿಟ್ಟುಸಿರಿನ ಶಬ್ದ ಕೇಳುವುದು.)

**ಕಾಲಪುರುಷ:–** ವೇದಾಂತಿಗಳೆ, ಮರಳಿ ನಿಮ್ಮನ್ನು ನಿಮ್ಮ ತಾಣಕ್ಕೆ ತಲ್ಪಿಸಲಾ?

**ವೇದಾಂತಿ:–** ಈಗಲೆ ಬೇಡ, ಕಾಲರಾಯಾ! ಈ ಅಧ್ಯಾತ್ಮ ಭೂಮಿಯ ವಾತಾವರಣದಲ್ಲಿ, ಇನ್ನೂ ಕೆಲವು ದಿನಗಳನ್ನು ಕಳೆಯಬೇಕೆಂದು ಬಯಕೆ-ಯುಂಟಾಗಿದೆ. ಇಲ್ಲಿಯೆ ಕೆಲಕಾಲ ಸುತ್ತಾಡುತ್ತಲಿರುತ್ತೇನೆ.

**ಕಾಲಪುರುಷ:–** ಆಗಲಿ, ವೇದಾಂತಿಗಳೆ! ನನ್ನ ಕರ್ತವ್ಯವು ನನ್ನನ್ನು ನಿಂತಲ್ಲಿ ನಿಲ್ಲಲೀಯುವುದಿಲ್ಲ ನಿಮ್ಮ ಬಯಕೆ ಪೂರಯಿಸಿದಾಗ, ನನ್ನನ್ನು ನೆನೆಯಿರಿ; ನಾನು ಬಂದು ನಿಮ್ಮ ಎಡೆಗೆ ಕರೆದೊಯ್ಯುತ್ತೇನೆ.

(ಕಾಲಪುರುಷನು ಭರ್ರೆಂದು ಹಾರಿಹೋದ ಸಪ್ಪು.)

## ೩

## ನಿರೂಪಕ

ಮಹಾತ್ಮರ ಮರಣಾನಂತರದ ಕಾಲವು ಸರಿಯತೊಡಗಿತು. ದೇವ-ದೂತರ ಜೊತೆಯಂತಿರುವ ಸರದಾರ್ ವಲ್ಲಭಭಾಯಿ ಮತ್ತು ಪಂಡಿತ ಜವಹರರ ನೇತೃತ್ವದಲ್ಲಿ ನಂಬುಗೆಯಿಟ್ಟು, ಜನತೆ ನಿಶ್ಚಿಂತೆಯಿಂದ ವ್ಯವಹರಿ

ಸಲು ತೊಡಗಿತು. ವಲ್ಲಭಭಾಯಿಯವರು ಭಾರತದ ಬುದ್ಧಿಶಕ್ತಿಯ ಪ್ರತಿನಿಧಿ; ಜವಹರರು ಭಾರತದ ಹೃದಯಶಕ್ತಿಯ ಪ್ರತಿನಿಧಿ. ಸರದಾರರ ಧೀಶಕ್ತಿಯ ಪರಿಣಾಮವಾಗಿ, ಭಾರತಭೂಮಿಯ ಅಂಗವನ್ನು ವಿಕಲಗೊಳಿಸಿದ್ದ ರಾಜ-ಮಹಾರಾಜರುಗಳ ಸಂಸ್ಥಾನಗಳೆಲ್ಲ, ಒಂದರ ಹಿಂದೊಂದರಂತೆ ಒಂದುಗೂಡಲು ತೊಡಗಿದುವು. ಭಾರತದ ಹೃದಯವನ್ನೇ ಕಲಕು–ಮಲಕುಗೊಳಿಸಿದ ಹೈದರಾಬಾದಿನ ರಜಕಾರರ ಹಾವಳಿ, ವಲ್ಲಭಭಾಯಿಯವರ ಬುದ್ಧಿವಿಕ್ರಮ ದಿಂದ ಹೇಳಲು ಹೆಸರಿಲ್ಲದಂತೆ ಹಾರಿಹೋಯಿತು. ಭಾರತದ ಬಸಿರಿನಂತಿದ್ದ ಹೈದರಾಬಾದ್ ರಾಜ್ಯವೂ ರಾಷ್ಟ್ರದ ಅಂಗವನ್ನು ಪರಿಪೂರ್ಣಗೊಳಿಸಲು ಸಹಕಾರ ಕೊಟ್ಟಿತು. ಮತ್ತೆ ಜನಜಂಗುಳಿಯಲ್ಲಿ ಎಲ್ಲೆಲ್ಲಿಯೂ ಆನಂದ, ಉತ್ಸಾಹ!

( ದೂರದಲ್ಲಿ ಛಣ್ರೆಂಬ ಶಬ್ದದೊಂದಿಗೆ ಕಾಲಪುರುಷನ ಹಾಡು ಕೇಳುವುದು. )

## ಹಾಡು

ನಿತ್ಯಜಾಗೃತ ನಾನು, ನಿತ್ಯಸಾಕ್ಷಿಯು ನಾನು,
ಸತ್ಯದ ನೆಲೆಯ ಕಂಡವನು....!
ಬಿತ್ತರಿಸುತಲಿಹೆ ಮೌನಭಾಷೆಯಲದನು,
ಚಿತ್ತಯಿಸುವರ ಕಾಣೆನೇನು ?

## ನಿರೂಪಕ

ಕಾಲವನ್ನು ಅರ್ಥಮಾಡಿಕೊಳ್ಳದ ಜನಜಂಗುಳಿಯ ಮೂಲಕ, ಪ್ರಪಂಚ ವೆಲ್ಲವೂ ಅಶಾಂತಿಯ ಕಡಲಾಗಿದೆ. ಕ್ರಾಂತಿ-ಪ್ರಕ್ಷೋಭೆಗಳ ಬಲವತ್ ಕಲ್ಲೋಲಗಳನ್ನು ಎಬ್ಬಿಸಿ ಸುತ್ತಲೂ ನೂಕುತ್ತಲಿದೆ. ಪ್ರಪಂಚದ ರಾಜಕೀಯ ಆರ್ಥಿಕ ಕ್ರಾಂತಿಕಲ್ಲೋಲದ ಆಘಾತದ ದುಷ್ಪರಿಣಾಮವನ್ನು, ಭಾರತವೂ ಅನುಭವಿಸಬೇಕಾಗಿ ಬಂದಿದ್ದರೂ, ರಾಷ್ಟ್ರದ ನಾಯಕರ ವಿಷಯದಲ್ಲಿರುವ ತುಂಬುನಂಬುಗೆಯಿಂದ, ಭಾರತದ ಜನತೆ ಇದ್ದುದರಲ್ಲಿಯೆ ನಿಶ್ಚಿಂತವಾಗಿ ಜೀವನ ಸಾಗಿಸುತ್ತಲಿದೆ. ದೇಶಪ್ರೇಮಿಗಳಾದ ನಾಡನಾಯಕರ ಶಕ್ತಿ-ಸದಾಶಯಗಳೂ, ಭಾರತಿಯ ಅಂತಃಶಕ್ತಿಯನ್ನು ಬೆಳೆಯಿಸುತ್ತಿರುವ ಯೋಗೀಂದ್ರ-ಮಹರ್ಷಿಗಳ ಆಶೀರ್ವಾದಗಳೂ, ಜನತೆಗೆ ಆತ್ಮರಕ್ಷೆಗಳಾಗಿರು-

ವಾಗ, ಭಾರತರಾಷ್ಟ್ರ ಬರಲಿರುವ ಸುಖ-ಸಮಾಧಾನಗಳ ಯೋಚನೆಯಲ್ಲಿಯೇ ಇದೆ. ಭಾರತೀಯರ ಉಲ್ಲಾಸಧ್ವನಿ ಕೇಳಿ:

[ ಅನೇಕ ಕಂಠಗಳಿಂದ ಹೊರಡುವ ಧ್ವನಿ ]

" ಭಾರತೀಯರು—ನಾವು—ಭಾರತೀಯರು !
ಮಲೆತು ನಿಂತ ವೈರಿಗಳನು
ಗೆಲಿದು ನನ್ನಿ-ನಲುಮೆಯಲಿಯೆ
ಚೆಲುವಿನಿಂದೆ ಇಳೆಯನಾಳಿ
ಬಲುಹುಗಾರರೆಂದು ನಲಿವ....
ಭಾರತೀಯರು—ನಾವು—ಭಾರತೀಯರು ! "

[ ಬಿರುಗಾಳಿ–ಗುಡುಗುಗಳ ಭೀಕರ ಗರ್ಜನೆಯು ಹಿನ್ನೆಲೆಯಲ್ಲಿರುವಾಗ ]

**ನಿರೂಪಕ**

ಅಯ್ಯೋ! ಇಂತಹ ಆಶಾವಾದದ ಕಾಲದಲ್ಲಿಯೂ ನಿರಾಶೆಯನ್ನುಂಟು ಮಾಡುವಂತಹ ವಜ್ರಪ್ರಹಾರ....ಇದು ಏನ ?

[ ಅನೇಕರ ಧ್ವನಿಯಲ್ಲಿ ಕೂಗು ]

" ಶಿವಶಿವಾ ! ಭಾರತದ ಕವಿಕೋಕಿಲೆ ಹಾರಿಹೋಯಿತು! ಸರೋಜಿನೀ ದೇವಿಯವರ ಆಕಸ್ಮಿಕ ಸಾವು! ಭಾರತ ಸ್ವಾತಂತ್ರ್ಯತಪಸ್ವಿನಿಯ ಚಿರ-ವಿಯೋಗ ! "

**ನಿರೂಪಕ**

ಅಹುದು ! ಅಸಹನೀಯವಾದ ದುಃಖವಾರ್ತೆ. ಸರೋಜಿನೀದೇವಿಯವರು ಅಗಲಿಹೋಗಿ, ಭಾರತಭೂಮಾತೆಯನ್ನು ಶೋಕಸಾಗರದಲ್ಲಿ ನೂಕಿದರು ! ಹಾ !

[ ಮತ್ತೆ ಕಾಲವು ಸರಿದು ಹೋಗುವ ಭರ್‍ರೆಂಬ ಶಬ್ದ ]

**ನಿರೂಪಕ**

ಬದುಕಿರುವವರಿಗೆ ವರ್ತಮಾನ ಸುಖವೂ ಭವಿಷ್ಯದ ಸುಖದ ಆಶೆಯೂ ಮಾದಕದ್ರವ್ಯದಂತೆ ಇರುವುವಲ್ಲವೆ ? ಇದೋ ಭಾರತೀಯರ ಮನದ ಮುಂಡಿಗೆ ಕೇಳಿರಿ !

[ ಅನೇಕರ ಕಂಠದಿಂದ ಹೊರಡುವ ಹಾಡು ]

" ಸತ್ಯದ ಬಳ್ಳಿಯ ಬಿತ್ತರಿಸುವೆವು....
ಮಿಥ್ಯದ ಕಸವನು ಕಿತ್ತೊಗೆಯುವೆವು....
ಮತ್ತೆ ರಾಮರಾಜ್ಯವ ಜಗದಿ....
ಸತ್ಯದಿ ತರುವೆವು ಹತ್ತಿರದಿ ! "

[ ಒಮ್ಮೆಲೆ ಬಿರುಗಾಳಿ ಬೀಸಿ, ಜನರ ಗುಲ್ಲು-ಗಲಾಟೆಯೇಳುವುದು. ]

[ ಅನೇಕರ ಧ್ವನಿಯಲ್ಲಿ ಕೂಗು ]

" ಅಕಟಾ, ಭಾರತದ ಏಕನಿಷ್ಠ ಸೇವಕ.... ಸಪ್ರೂ ಅವರ ಮರಣ ! ಇನ್ನೊಬ್ಬ ಭಾರತಪುತ್ರನ ಚಿರನಿರ್ಗಮನ ! "

**ನಿರೂಪಕ**

ಸಪ್ರೂ ! ಸರ್ ತೇಜ ಬಹಾದ್ದೂರ ಸಪ್ರು ! ತನ್ನ ಬುದ್ಧಿವಂತಿಕೆಯ ಬಲದಿಂದ ಬ್ರಿಟಿಶರನ್ನೂ ತಲೆಬಾಗಿಸಲು ಹಚ್ಚಿದ ಪ್ರಾಗತಿಕ ವೀರ ! ಕಷ್ಟ ಕಷ್ಟ ! ಇನ್ನೊಬ್ಬ ಭಾರತಪುತ್ರನ ಮರಣ !

[ ಮತ್ತೆ ಕಾಲವು ಸರಿದು ಹೋಗುವ ಛರ್ರೆಂಬ ಸಪ್ಪಳ ]

[ ಭಾರತೀಯರ ಹೆಸ್ಮೆಯ ಹಾಡು ]

" ಭೋಗಗಳಿಗೆ ನೀರನೀಡಿ, ತ್ಯಾಗದಲಿಯೆ ಭೋಗನೋಡಿ,
ಯೋಗಿರಾಜನೊಡನೆ ಬೆರೆಯೆ, ಯೋಗಪಥವ ಕಂಡುಹಿಡಿದ
ಭಾರತೀಯರು—ನಾವು—ಭಾರತೀಯರು ! "

[ ಒಮ್ಮೆಲೆ ಬಿರುಗಾಳಿ ಬೀಸಿ, ಬಹುಜನರ ಕಾತರದ ಕೂಗು ಕೇಳುವುದು. ]

" ಮಹರ್ಷಿಗಳ ವಿಯೋಗ ! ಭಾರತೀಯರಲ್ಲಿ ಮೌನಭಾವದಿಂದಲೆ ಆಧ್ಯಾತ್ಮಿಕ ತೇಜವನ್ನು ತುಂಬುತ್ತಲಿದ್ದ ರಮಣಮಹರ್ಷಿಗಳ ಅವತಾರ ಸಮಾಪ್ತಿ ! ಅಯ್ಯೊ ! ಭಾರತಕ್ಕೆ ಕಷ್ಟಕಾಲ, ಕಷ್ಟಕಾಲ ! "

**ನಿರೂಪಕ**

ರಮಣಮಹರ್ಷಿ ! ಭಾರತದ ಆಧ್ಯಾತ್ಮ ಪರಂಪರೆಯ ನಂದಾದೀಪ ವಾಗಿದ್ದ ರಮಣ ಮಹರ್ಷಿ ಸಮಾಧಿಸ್ಥರಾದರು ! ಒಂದರ ಹಿಂದೊಂದು ವಜ್ರಾಘಾತ ! ಹಾ ! ( ನಿಟ್ಟುಸಿರು )

[ ಮತ್ತೆ ಕಾಲವು ಸರಿದು ಹೋಗುವ ಭರ್ರೆಂಬ ಸಪ್ಪಳ ]
[ ಭಾರತೀಯರ ಹೆಮ್ಮೆಯ ಹಾಡು ]

" ಭಾವನೆಗಳ ಕೊಳಲನೂದಿ, ಭಾವರಾಗಗಳನು ಹಾಡಿ
ದೇವರಾಯನೊಡನೆ ಆಡಿ, ಸಾವ ನೋವ ತುಳಿದು ನಿಂತ
ಭಾರತೀಯರು—ನಾವು—ಭಾರತೀಯರು ! "

[ ಇದ್ದಿದ್ದ ಹಾಗೆಯೆ ಬಿರುಗಾಳಿ, ಗುಡುಗು–ಮಿಂಚು, ಜನಜಂಗುಳಿಯ ಕೂಗು ! ]

" ಅಯ್ಯೋ, ಅರವಿಂದಯೋಗಿಗಳ ಚಿರಸಮಾಧಿ ! ಪೂರ್ವ–ಪಶ್ಚಿಮಗಳೆರಡಕ್ಕೂ ಒಂದೇ ಅಮೃತಜ್ಯೋತಿಯ ಬೆಳಕನ್ನಿತ್ತು, ವಿಶ್ವವನ್ನೆಲ್ಲ ಒಂದು-ಗೂಡಿಸುವ ಎಣಿಕೆಯಲ್ಲಿದ್ದ ದಿವ್ಯಜೀವನದ ಪರಿಸಮಾಪ್ತಿ ! ತಾಯೇ ! ಕತ್ತಲು, ಕಗ್ಗತ್ತಲು ! ಪ್ರಳಯದ ಬಿರುಗಾಳಿ ! ರಕ್ಷಿಸು, ರಕ್ಷಿಸು !

## ನಿರೂಪಕ

ಶಿವಶಿವಾ ! ಭಾರತದ ಅಧ್ಯಾತ್ಮಸೂರ್ಯ ಕಣ್ಮರೆಯಾದನೇ ? ತನ್ನ ದಿವ್ಯಮಾನಸಸೌರಭದಿಂದ ಪ್ರಪಂಚವನ್ನೇ ಭಾರತದತ್ತ ಸೆಳೆಯುತ್ತಲಿದ್ದ ಅರಳಿದ ಅರವಿಂದ, ಅಡಗಿ ಹೋಯಿತೇ ? ಭಾರತಮಾತೆ, ದುರ್ದೈವಿ ನೀನು; ನಿಜವಾಗಿಯೆ ದುರ್ದೈವಿ ನೀನು !

[ ಹಟಾತ್ತಾಗಿ ರಂಗದ ಮೇಲೆ ಭಾರತಮಾತೆ ಪ್ರಕಟವಾಗುವಳು. ]

**ಭಾರತಮಾತೆ:–** ಆಕಟಾ, ನಿಜವಾಗಿಯೂ ದುರ್ದೈವಿ ನಾನು ! ದುರ್ವಿಧಿ ನನ್ನ ಬೆನ್ನಟ್ಟಿಕೊಂಡೇ ಹೊರಟಿದೆ. ಎಂತೆಂತಹ ಪ್ರಾಣರತ್ನಗಳನ್ನು ಕಳೆದುಕೊಳ್ಳುತ್ತಲಿದ್ದೇನೆ ನಾನು ! ನನ್ನ ಜೀವಜ್ಯೋತಿಗಳನ್ನೆಲ್ಲ ಮೃತ್ಯುವು ಸೆಳೆದುಕೊಂಡು ಒಯ್ಯುತ್ತಲಿದ್ದಾನೆ. ನನ್ನ ಅರಳಿದ ಬಾಳ ಹೂಗಳನ್ನೆಲ್ಲ, ಮಾರಿ ತನ್ನ ಮಾಲೆಗಾಗಿ ಆಯುತ್ತಲಿದ್ದಾಳೆ ! ಶಿವಶಿವಾ ! ಇನ್ನೇನು ಗತಿ ? ಮೃತ್ಯುಂಜಯನಾದ ನೀನು ನನ್ನ ಮೊರೆಯನ್ನು ಕೇಳಲಾರೆಯಾ ? ದೇವಾ, ಯಾವ ತಪಸ್ಸಿನಿಂದ ನಾನು ಈ ದಿವ್ಯಾತ್ಮಗಳನ್ನು ರಕ್ಷಿಸಿಕೊಳ್ಳಬೇಕು ? ಹೇಳು ದೇವಾ ! ( ಒಮ್ಮೆಲೆ ಆಶ್ಚರ್ಯ–ಕುತೂಹಲಗಳಲ್ಲಿ ಧ್ವನಿಯನ್ನು ಬದಲಿಸಿ ) ಅಮ್ಮಾ, ಯಾವನಿವ ಕೃಷ್ಣವರ್ಣದ ಛಾಯಾಪುರುಷ ? ಭೀಕರವಾದ

ಆಕಾರವಾದರೂ ಶಾಂತಭಾವ ಬಳಸಿ ಬರುತ್ತಲಿದೆ; ಇದಾವುದೋ ಮಹಾ ಶಕ್ತಿಯೇ ಆಗಿರಬೇಕು. ನನ್ನ ಮೊರೆಯನ್ನು ಕೇಳಿ ಮೃತ್ಯುಂಜಯನೇ ತನ್ನ ಮಾತನನ್ನು ಕಳುಹಿರಬೇಕು! ಈ ಮಹಾಶಕ್ತಿ ನನಗೆ ನೆರವನ್ನು ಕೊಟ್ಟೀತೆ? (ಸಮಾಧಾನದ ಸ್ವರದಲ್ಲಿ) ಮುಳುಗುತ್ತಿರುವವರಿಗೆ ಹುಲ್ಲುಕಡ್ಡಿಯ ಅಧಾ-ರವೂ ಆಶೆಗೆ ಸ್ಥಾನವಲ್ಲವೆ? ಅಯ್ಯಾ, ದಿವ್ಯಪುರುಷಾ! ನೀನಾರು?

[ಛಾಯಾಪುರುಷನ ಉತ್ತರ]

"ತಾಯಿ, ನೀನು ನನ್ನನ್ನು ಗುರುತಿಸಲಾರೆಯಾ? ನಾನು ಮೃತ್ಯುದೇವ!"

**ಭಾರತಮಾತೆ:**– (ಕೆಳಗಿನ ದನಿಯಲ್ಲಿ) ಮೃತ್ಯುದೇವ....! ಮೃತ್ಯು ದೇವ....!"

**ಮೃತ್ಯುದೇವ:**– ಅಹುದು ತಾಯೇ, ನಾನು ಮೃತ್ಯುದೇವ! ನಾನೊಬ್ಬ ವಿಶ್ವಶಕ್ತಿಯ ಊಳಿಗದಾಳು! ಆಕೆ ಹೇಳಿದುದನ್ನು ನೆರವೇರಿಸುತ್ತ ಲಿರುವುದೇ ನನ್ನ ನಿತ್ಯದ ಕರ್ತವ್ಯ!

**ಭಾರತಮಾತೆ:**– ಮೃತ್ಯುದೇವಾ! ನಿನ್ನ ಕರ್ತವ್ಯ ಬುದ್ಧಿಗೆ ಕಣ್ಣುಗಳೇ ಇಲ್ಲವೆ? ನಿನ್ನ ಕರುಳಿನಲ್ಲಿ ಕನಿಕರವೆಂಬುದಕ್ಕೆ ಎಡೆಯೆ ಇಲ್ಲವೆ? ನನ್ನ ಹಿರಿಹಿರಿಯ ಪೂರ್ಣಪ್ರಜ್ಞರನ್ನು ಎಡೆಬಿಡದೆ ಸೆಳೆದುಕೊಳ್ಳುತ್ತ ಹೊರಟಿರು-ತ್ತೀಯಲ್ಲಾ ತಂದೆ!

**ಮೃತ್ಯುದೇವ:**– ಕರ್ತವ್ಯ, ಕರುಣೆ–ಕರುಳುಗಳನ್ನು ಎಣಿಸದು, ತಾಯೆ! ನಿನ್ನ ದುಃಖಧ್ವನಿ ನನ್ನ ಕರುಳನ್ನು ಕೊರೆಯುತ್ತಿದೆಯಾದರೂ, ನಿಯತಿಯ ಆದೇಶವನ್ನು ಮೀರಿ ನಡೆಯಲಿಕ್ಕೆ ನನಗೆ ಸಾಧ್ಯವಿಲ್ಲ. ನನ್ನ ಕರ್ತವ್ಯವನ್ನು ನಾನು ನೆರವೇರಿಸಲೇ ಬೇಕು.

**ಭರತಮಾತೆ:**– ಮೃತ್ಯುದೇವಾ, ನಿನ್ನ ಕರ್ತವ್ಯ ನಿನಗೆ ಇರಲಿ! ನನ್ನ ವಿಷಯದಲ್ಲಿ ದಯದೋರು ದೊರೆಯೆ! ನನ್ನ ದುಃಖವನ್ನು ಮರೆಯಲಿಕ್ಕಾ-ದರೂ ಸ್ವಲ್ಪ ಅವಕಾಶ ಕೊಡಬಾರದೆ? ಇಂದು ಮತ್ತೆ ಏತಕ್ಕೆ ಬಂದಿರುವೆ ನನ್ನ ನಾಡಿನಲ್ಲಿ?

**ಮೃತ್ಯುದೇವ:**– ಈಗಲೆ ಕೇಳದಿರು ಭಾರತೀ! ಮೊದಲೇ ಹೇಳಿ, ನಿನ್ನ ದುಃಖದ ದುರ್ದಶೆಯನ್ನು ಕಣ್ಣಾರೆ ನೋಡಿ ನಾನೂ ಸಹಿಸಲಾರೆ!

**ಭಾರತಮಾತೆ:**– (ಅಧೀರಭಾವದಿಂದ) ಏನು? ನಿನ್ನ ಪಾಶಕ್ಕೆ ಮತ್ತಾವ ಭಾರತಪುತ್ರನ ಬಲಿಯಾಗಬೇಕು? ಮೃತ್ಯುದೇವಾ, ನಿನಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಬಂದ ದಾರಿಯಿಂದ ಮರಳಿಹೋಗು ಬಂಧು!

**ಮೃತ್ಯುದೇವ:**– ಬರಿಗೈಯಿಂದ ಮರಳಿ ಹೋಗಲಿಕ್ಕೆ ಆಗುವಂತಿಲ್ಲ, ತಾಯಿ! ಈ ಸಲ ನಿನ್ನ ಮೇಲೆ ಬೀಳಲಿರುವುದು ಬಲವಾದ ಬರಸಿಡಿಲಿನೇಟು! ಸಹಿಸಿಕೊಳ್ಳು ಭಾರತೀ; ಸಹಿಸಿಕೊಳ್ಳು! ನನ್ನ ಕರ್ತವ್ಯ, ನನಗೀಗ ನಿಂತು ಮಾತನಾಡಲೂ ಅವಕಾಶವನ್ನು ಕೊಡಲಾರದು. ಇದೀಗಲೆ ಹೊರಡಬೇಕು!

(ಮೃತ್ಯುವು ಅದೃಶ್ಯನಾಗುವನು.)

**ಭಾರತಮಾತೆ:**– (ದೈನ್ಯಧ್ವನಿಯಲ್ಲಿ) ಮೃತ್ಯುದೇವಾ, ಮೃತ್ಯುದೇವಾ! ನನ್ನ ಮೊರೆಯನ್ನು ಕೇಳು! ಅಯ್ಯೊ, ಮಿಂಚಿನಂತೆ ಅದೃಶ್ಯನಾಗಿಬಿಟ್ಟೆಯಲ್ಲಾ! ನನ್ನ ಮಡಿಲಲ್ಲಿ ಇನ್ನೆಂತಹ ಅಸಹ್ಯ ದುಃಖವನ್ನು ಕಟ್ಟಲಿರುವೆಯೊ! ಮತ್ತಾವ ಅಮೃತಜೀವವನ್ನು ಕಳೆದುಕೊಳ್ಳಬೇಕಾಗಿದೆಯೋ ನಾನು!

(ದೂರದಿಂದಲೆ ಮೃತ್ಯುದೇವನ ಧ್ವನಿ)

'ನಿಯತಿಯ ಮುಂದೆ ಯಾರ ಆಟವೂ ನಡೆಯದು ದೇವೀ! ಈಗ ತಾಳ್ಮೆಯೊಂದೇ ನಿನ್ನ ಮುಂದಿರುವ ದಾರಿ....!'

**ಭಾರತಮಾತೆ:**– ತಾಳ್ಮೆ! ತಾಳ್ಮೆ! ಹೃದಯವೇ ನೀನಿನ್ನು ಹೃದಯವಾಗಿ ಉಳಿಯಬೇಡ; ಕಗ್ಗಲ್ಲಾಗು: ಕಗ್ಗಲ್ಲಿನ ಕಣಿಯಾಗು!

(ಅನೇಕರ ಕಂಠದಲ್ಲಿ ಕೂಗು)

"ಅಯ್ಯೊ, ಮುಂಬಯಿ ನಗರದಲ್ಲಿ ಸರದಾರ್ ಪಟೇಲರ ನಿಧನ! ಶಿವ ಶಿವಾ, ಅಂತಹ ಉಕ್ಕಿನೆದೆಯ ಭಾರತವೀರನನ್ನೂ ಸಾವು ನುಂಗಿತೇ? ಅಯ್ಯೊ, ಭಾರತಿಯ ಮದ್ದಾನೆ–ವಲ್ಲಭಭಾಯಿ–ನಮ್ಮನ್ನಗಲಿದರು! ಹಾ, ಡಿಸೆಂಬರ್ ಹದಿನೈದರ ದುರ್ದಿನವೆ! ರಾಷ್ಟ್ರಕ್ಕೆ ಹಿರಿಯ ನಾಯಕರು ಇನ್ನಾರು? ಭಾರತದ ಧೈರ್ಯದ ಗೌರೀಶಂಕರ ಮುರಿದು ಬಿದ್ದಿತೇ? ಮುಂದೇನು? ಮುಂದೇನು?"

**ಭಾರತಮಾತೆ:**– ಶಿವಶಿವಾ! ಎಂತಹ ದುರ್ಧರವಾರ್ತೆ! ಇದನ್ನು ಕೇಳುವ ನನ್ನ ಕಿವಿಗಳು ಏಕೆ ಒಡೆದು ಹೋಗಲಿಲ್ಲ? ಮೃತ್ಯುದೇವಾ, ನಿನ್ನ ಕರ್ತವ್ಯ ಇಷ್ಟೊಂದು ದುಷ್ಟ-ನಿಷ್ಠುರವಾದುದೇ? ನನ್ನನ್ನು ಅಳಲಿನ ಕಡಲಲ್ಲಿಯೇ ಮುಳುಗಿಸಿದೆಯಲ್ಲವೋ! ನನ್ನ ಸಹನೆಗೆ ಸೀಮೆಯಿಲ್ಲವೆ? ನನ್ನ ವೀರವಲ್ಲಭ ಕುಮಾರಾ, ಬಾಪೂಜಿಯ ಆದೇಶದಂತೆ, ನಿನ್ನಲ್ಲಿ ಅವನನ್ನು ಕಂಡು ಆತನ ಅಗಲಿಕೆಯ ಸಂತಾಪವನ್ನು ಅಡಗಿಸಿಕೊಂಡಿದ್ದೆ. ನನ್ನ ಅಭಿಮಾನ ರಕ್ಷಕ ಕುಮಾರನು ನೀನು! ನನ್ನ ವಿಕಲಾಂಗಗಳನ್ನು ಒಂದುಗೂಡಿಸಿ, ನಿನ್ನ ಸಂಜೀವಿನೀ ಶಕ್ತಿಯಿಂದ ಭದ್ರರೂಪಿಣಿಯನ್ನಾಗಿ ಮಾಡಿದ ಧೀರಶಿಲ್ಪಿ ನೀನು! ನಿನ್ನಿಂದ ನನ್ನ ನ್ಯೂನತೆಗಳನ್ನು ಇನ್ನೂ ಎಷ್ಟೆಷ್ಟೋ ನೀಗಿಸಿಕೊಳ್ಳಬೇಕೆಂದಿದ್ದೆ. ನೀನು ಹೊರಟು ನಡೆದೆ....ನನಗಿನ್ನಾರು ಗತಿ! ಅಯ್ಯೋ, ವಲ್ಲಭರಾಯಾ, ವಲ್ಲಭಕುಮಾರಾ! (ಭಾರತಿ ಮೂರ್ಛಿತಳಾಗಿ ಬೀಳುವಳು).

೪

(ಒಮ್ಮೆಲೆ ವೇದಾಂತಿಯು ರಂಗಕ್ಕೆ ಬರುವನು.)

**ವೇದಾಂತಿ:**– ಅಬ್ಬಾ, ಮರಣ....ಮರಣ....ಮರಣ! ಎಂತಹ ಸ್ಥಿತಪ್ರಜ್ಞನಿಗೂ ಹುಚ್ಚು ಹಿಡಿಸಬಲ್ಲದು ಮರಣ! ಭಾರತಮಾತೆಯಂತಹ ವೇದಾಂತಮಯಿಗೂ ಇಂತಹ ದುಃಖವೇ? ಇನ್ನು ಈಕೆಯ ದುಃಖವನ್ನು ಪರಿಹರಿಸಿ ಮೇಲಕ್ಕೆಬ್ಬಿಸುವವರಾರು? ಈ ದುಃಖದ ಮುಂದೆ ನನ್ನ ವೇದಾಂತ ಬೋಧೆಯೂ ಯಾವ ಕಾರ್ಯವನ್ನೂ ಮಾಡದು! ನನಗೀಗ ಏನು ಮಾಡಬೇಕೆಂಬುದೇ ತಿಳಿಯದಂತಾಗಿದೆ. ಕಾಲಪುರುಷನನ್ನಾದರೂ ಕರೆಯಲೆ?

**ಕಾಲಪುರುಷ:**– ನನ್ನನ್ನು ಕರೆಯುವುದೇ ಬೇಕಾಗಿಲ್ಲ ವೇದಾಂತಿಗಳೆ! ನಿಮ್ಮ ಜೊತೆಯಲ್ಲಿಯೇ ಇದ್ದು ನಡೆಯುವುದನ್ನೆಲ್ಲ ನೋಡುತ್ತಲೇ ಇರುವೆನು.

**ವೇದಾಂತಿ:**– ಅಹುದು ಮಹಾತ್ಮಾ, ನೀನು ಸರ್ವಸಾಕ್ಷಿಯಲ್ಲವೆ? ಈ ಭಗವತೀ ಭಾರತಿಗೆ ದುಃಖದಿಂದ ವಿಮೋಚನೆಯೆ ಇಲ್ಲವೆ?

**ಕಾಲಪುರುಷ:**– ವಿಮೋಚನೆಯೇಕಿಲ್ಲ? ವಿಮೋಚನೆಯಿದ್ದೇ ಇದೆ. ಈ ಲೊಕದಲ್ಲಿ ಬಂಧನ–ವಿಮೋಚನ, ಸುಖ–ದುಃಖ, ಜನನ–ಮರಣ ಇವುಗಳ

ಚಕ್ರಗಳು ಸುತ್ತುತ್ತಲೇ ಇರುತ್ತವೆ. ಈ ಚಕ್ರಗಳೇ ಜಗತ್ತನ್ನು ಪೂರ್ಣತೆಗೆ ಏರಿಸದೆ, ನಿಯತಿಯ ಆಜ್ಞೆಯಂತೆ ಅಪೂರ್ಣವಾಗಿಸಿ ನಿಲ್ಲಿಸಿಬಿಟ್ಟಿರುತ್ತವೆ. ಅಪೂರ್ಣವಾದುದರಿಂದಲೆ ಜಗತ್ತು ವಕ್ರವಾಗಿದೆ. ಎಷ್ಟೋ ಜೀವಗಳು ತಮ್ಮ ಸತ್ತ್ವದಿಂದ ವಿಭೂತಿಪದಕ್ಕೇರಿ, ಈ ಜಗತ್ತಿನ ಡೊಂಕನ್ನು ತಿದ್ದಲು ದುಡಿಯುತ್ತವೆ. ನಿಯತಿಯ ಕರೆ ಬರಲು ಮರಣಕ್ಕೆ ಗುರಿಯಾಗಿ ಹೊರಟುಬಿಡುತ್ತವೆ. ಲೋಕ ಹುಟ್ಟಿದಂದು ನಾನು ಹುಟ್ಟಿದ್ದೇನೆ; ಅಂದಿನಿಂದಲೂ ಇದನ್ನೆಲ್ಲ ಕಣ್ಣಾರೆ ಕಾಣುತ್ತ ಬಂದಿದ್ದೇನೆ.

**ವೇದಾಂತಿ:**– ಅಯ್ಯಾ, ಋಷಿಗಳು, ಮುನಿಗಳು, ಶ್ರೀಕೃಷ್ಣ, ಶ್ರೀರಾಮ ಬುದ್ಧ, ಕ್ರಿಸ್ತ, ವೇದಾಂತಬೋಧಕ ಆಚಾರ್ಯರು ಇವರು ಹುಟ್ಟಿ ಲೋಕದಲ್ಲಿ ಏನೂ ಮಾಡಲಿಲ್ಲವೆ ?

**ಕಾಲಪುರುಷ:**- ಮಾಡಲಿಲ್ಲವೇಕೆ ? ಏನೇನೋ ಮಾಡಿದರು, ಮಾತನಾಡಿದರು, ಬರೆದು ಬರೆದು ಇಟ್ಟರು. ಇದಕ್ಕೂ ಹೆಚ್ಚಿಗೇನು ಮಾಡಬೇಕವರು ಪಾಪ! ಸ್ಥಳ-ಕಾಲಗಳಿಂದ ಬದ್ಧರಾದವರವರು !

**ವೇದಾಂತಿ:**– ಅಯ್ಯೋ, ನನ್ನ ಕೆಂಗುರುಡುತನವೇ! ಕಾಲರಾಯಾ, ನಿನ್ನ ಅನುಭವವಾಣಿ ಸಂಪೂರ್ಣ ಸತ್ಯವಾದುದು ! ಅವರೆಲ್ಲ ದುಡಿದು ದಣಿದು ಮಡಿದು ಹೋದರೂ ಜಗತ್ತು ಇದ್ದ ಹಾಗೆಯೆ ಇದೆ !

**ಕಾಲಪುರುಷ:**–ಇನ್ನೇನಾಗಬೇಕು ವೇದಾಂತಿಗಳೇ! ಜೀವಿಗಳ ಜನನದೊಂದಿಗೆ ನೂತ್ನನೂತ್ನವಾದ ಅಶಕ್ತತೆ-ಅಜ್ಞಾನಗಳು ಬಂದು ಬಂದು ತುಂಬುತ್ತಿರುತ್ತವೆ; ಇಲ್ಲಿಯ ಪರಿಸ್ಥಿತಿಯಿಂದವು ಪರಿಣಾಮಗೊಂಡು, ಶಕ್ತಿ–ಜ್ಞಾನಸ್ಥಿತಿಯನ್ನು ಸಮೀಪಿಸುವುದರಲ್ಲಿಯೆ, ಮರಣವು ಅವನ್ನು ಕಟ್ಟಿಕೊಂಡು ಹೋಗಿ, ಲೋಕದಿಂದ ಮರೆಮಾಡುತ್ತದೆ. ನಿಯತಿಯ ಈ ಚಕ್ರದ ಆಟವನ್ನು ಅರಿತುಕೊಳ್ಳದೆ, ನಮ್ಮ ವೇದಾಂತಿಗಳು ಮನದ ಮಂಡಿಗೆ ಮಾಡುತ್ತಿರುತ್ತಾರೆ; ತಾರ್ಕಿಕರು ತಮ್ಮ ಮಾತಿನ ಕಾದಾಟ ನಡೆಯಿಸಿರುತ್ತಾರೆ. ಕವಿಗಳು ಕನಸಿನ ಮಂದಿರಗಳನ್ನು ಕಟ್ಟುತ್ತಿರುತ್ತಾರೆ; ವಿಜ್ಞಾನಿಗಳೆನಿಸಿಕೊಂಬುವವರು ಜಡವನ್ನು ಹಿಂಜುತ್ತ ಕುಳಿತುಕೊಳ್ಳುತ್ತಾರೆ.

**ವೇದಾಂತಿ:**– ಧನ್ಯ ಧನ್ಯ ಕಾಲಪುರುಷಾ! ನೀನು ನನ್ನ ಕಣ್ಣುಗಳನ್ನು ಚೆನ್ನಾಗಿ ಇಂದು ತೆರೆಯಿಸಿದೆ. ವಿಶ್ವದಲ್ಲಿ ನಿಜವಾದ ಅಮೃತಾತ್ಮನೆಂದರೆ ನೀನೊಬ್ಬನೇ! ನಿನಗೆಂದೂ ಚ್ಯುತಿಯಿಲ್ಲ. ಎಂತಹ ಪ್ರಳಯುಗಳನ್ನೂ ನುಂಗಿ ಬದುಕುವವನೆಂದರೆ ನೀನೊಬ್ಬನೆ! ವೇದಾಂತಿಗಳು ಹೇಳುವ ಪರಬ್ರಹ್ಮನ ಲಕ್ಷಣಗಳು ಅನ್ವಯಿಸುವುದು ನಿನಗೊಬ್ಬನಿಗೇ! ನೀನೇ ಅಮೃತಾತ್ಮ! ನೀನೇ ಅಮೃತಪುರುಷ! ಮಹಾತ್ಮಾ, ಈ ಭಾರತಿಯಿನ್ನು ಹೀಗೆಯೆ ದುಃಖಿಸುತ್ತ ಬೀಳಬೇಕೆ?

**ಕಾಲಪುರುಷ:**– ಬೀಳಲಾರಳು ವೇದಾಂತಿಗಳೇ! ದುಃಖ ಕ್ಷಣಿಕವಾದುದೆಂಬುದು ಭಾರತಿಯ ಬಹುಕಾಲದ ಅನುಭವ. ಅವಳ ಲೌಕಿಕಭಾವ ಅವಳನ್ನು ಇದೀಗ ಅಳಿಸುತ್ತಲಿದೆ. ಕಾಲರಹಸ್ಯದ ಜಾಗೃತಿಯಾಗುತ್ತಲೇ, ಅವಳು ದುಃಖದಿಂದ ಚೇತರಿಸಿಕೊಳ್ಳುವಳು; ತನ್ನ ಶುಭಭವಿಷ್ಯಕ್ಕಾಗಿ ಮತ್ತೆ ಕಾರ್ಯಪ್ರವೃತ್ತಳಾಗುವಳು. ವೇದಾಂತಿಗಳೆ, ಬರಲಿರುವ ಕಾಲ ಭಾರತಿಗೆ ಅಭ್ಯುದಯದ ಕಾಲವಿದೆ. ಶ್ರೇಯಸ್ಸಿನ ಕಾಲವಿದೆ. ಶಾಂತಿ-ಸುಖಗಳ ಕಾಲವಿದೆ. ಹಳಬರು ಹೋದರೇನಾಯಿತು; ಹೊಸಬರು ಮುಂದೆ ಬರುವರು. ಭಾರತದ ಅಭ್ಯುನ್ನತಿಗಾಗಿ ಕಾರ್ಯ ಮಾಡುವರು. ನಿರಾಶೆಪಡುವ ಕಾರಣ ವೇನೂ ಇಲ್ಲ.

**ವೇದಾಂತಿ:**– ನನ್ನ ಪರಬ್ರಹ್ಮ ವಸ್ತುವೇ! ನಿಜವಾದ ಬ್ರಹ್ಮಜ್ಞಾನವನ್ನು ನೀನೆ ನನಗೆ ಮಾಡಿಕೊಟ್ಟೆ! ನಿನಗೆ ಅನಂತ ನಮಸ್ಕಾರ.

**ಬ್ರಹ್ಮಾರ್ಪಣಂ ಬ್ರಹ್ಮಹವಿಃ**
**ಬ್ರಹ್ಮಾಗ್ನೌ ಬ್ರಹ್ಮಣಾಹುತಂ।**
**ಬ್ರಹ್ಮೈವ ತೇನ ಗಂತವ್ಯಂ**
**ಬ್ರಹ್ಮಕರ್ಮ ಸಮಾಧಿನಾ ॥**

---

# ಅಮೃತಾತ್ಮ



ದಿನದಿನವು ಚಣ-ಚಣಕೆ ನೂರಾರು ಜೀವಗಳು
ಎಣಿಕೆಯಿಲ್ಲದೆ ಇಳೆಗೆ ಇಳಿದು ನೆಲೆಗೊಳ್ಳುವುವು;
ಅನುವನರಿಯನೆ ನಿನ್ನೆ-ಇಂದು-ನಾಳೆಯ ತಿರುಳ,
ವಿಷಮಗೊಳಿಸಿಹವು ಜಗವ ||

ಮನು-ಮುನಿ-ಮಹಾಪುರುಷರೆನಿತೆನಿತೊ ಹೆಣಗಿದರು ...
ಹಣಿಯುಲಾರದೆ ಜಗದ ವಿಷಮತೆಯ ಸಾಂದರು;
ಅನುವರಿತು ವಿಷಮತೆಯ ತಿದ್ದಬಲ್ಲವನೊಬ್ಬ—
ಆವನೆ ಅಮೃತಾತ್ಮ....ಕಾಲ ! ||

## ಪಾತ್ರಪರಿಚಯ

| | |
|---|---|
| ನಿವೇದಕ | ನಾಟಕದ ಸೂತ್ರಧಾರ |
| ಪುಟ್ಟ | ರಂಗೂನ ಅಣ್ಣಾ |
| ರಂಗೂ | ಪುಟ್ಟನ ತಂಗಿ |
| ಅವ್ವ | ರಂಗೂ-ಪುಟ್ಟರ ತಾಯಿ |

ಅಲ್ಲದೆ ವೃಂದಗೀತದವರು, ನಾಗರಪಂಚಮಿ ಹಾಡು ಹೇಳುವ ಹಳ್ಳಿಯ ಹುಡುಗಿಯರು, ಲಾವಣೀ ಹೇಳುವವ.

 

## ಘಟನೆಯ ದಿನ

ಯಾವುದೊಂದು ನಾಗರಪಂಚಮಿಯ ಮೊದಲ ದಿನ.

# ತಂಬಿಟ್ಟು



### ವೃಂದಗೀತ

( ಎಲ್ಲರೂ ಕೂಡಿ ಹೇಳಬೇಕಾದ ಹಾಡು )

ಬಾ, ಶ್ರಾವಣ ಶುಭಸಮೀರ ಬಾರಾ!

೧

ಬಾ, ಶ್ರಾವಣ ಶುಭಸಮೀರ,
ಕಾಲನೊಲುಮೆಯೋಲೆಕಾರ,
ಸುಖನಾಟಕ ಸೂತ್ರಧಾರ,
ಬುವಿಯ ಬೇಟಗಾರ!
ಬಾ, ಶ್ರಾವಣ ಶುಭಸಮೀರ ಬಾರಾ!

೨

ತೆಂಗು ಕಂಗು ಬಾಳೆ ಹಲಸು
ಹೊಂಗೇದಗೆ ಬನದ ಬೆಳಸು
ನಿನ್ನಿಂದಲೆ ಎಲ್ಲ ಹುಲುಸು
ಸಿರಿಯ ಸಂಚುಗಾರಾ!
ಬಾ. ಶ್ರಾವಣ ಶುಭಸಮೀರ ಬಾರಾ!

**ನಿವೇದಕ :**

ಶ್ರಾವಣಮಾಸ ಸುಖದ ಆಶೆಯನ್ನು ಹುಟ್ಟಿಸುವ ಕಾಲ. ಬಾಳಿಗೆ ಬೇಸತ್ತವರಲ್ಲಿ ಬದುಕುವ ಬಯಕೆಯನ್ನು ಹುಟ್ಟಿಸುವ ಸಿರಿಗಾಲ. ಶ್ರಾವಣದ ದಿನಗಳೆಂದರೆ ಒಂದೊಂದೂ ಹಬ್ಬದ ಉಬ್ಬಿನ ದಿನಗಳು. ಸಂಪತ್‌ಶುಕ್ರವಾರ, ಸಂಪತ್‌ಶನಿವಾರ, ಶ್ರಾವಣ ಸೋಮವಾರ, ಹೊಸ ಮದುವಣಗಿತ್ತಿಯರಿಗೆ

ಮಂಗಳಗೌರಿಯ ಮಂಗಳವಾರ, ಬುಧ-ಬೃಹಸ್ಪತಿಗಳ ಪೂಜಾದಿನಗಳಾದ ಬುಧವಾರ–ಗುರುವಾರ.... ಹೀಗೆ ವಾರದ ಹೆಸರಿನಿಂದಲೂ ಹಬ್ಬಗಳು; ನಾಗರ ಚವತಿ, ನಾಗರಪಂಚಮಿ, ಸಿರಿಯಾಳ ಷಷ್ಠಿ, ರಕ್ಷಾದ್ವಾದಶಿ, ನೂಲಹುಣ್ಣಿವೆ, ಗೋಕುಲಾಷ್ಟಮಿ.... ಹೀಗೆ ತಿಥಿಗಳ ಹೆಸರಿನಿಂದಲೂ ಹಬ್ಬಗಳು!

## ವೃಂದಗೀತ

(ಎಲ್ಲರೂ ಕೂಡಿ ಹಾಡುವುದು.)

ಬಂದಿತು ಬಂದಿತು ಹಬ್ಬದ ಮಾಸ—
ತಂದಿದೆ ತರುತಿದೆ ಸವಿಸವಿ ತಿನಿಸ—
ಚೆಂದದರಳು ತಂಬಿಟ್ಟನು ಮೆಲ್ಲುತ
ಉಯ್ಯಲೆಯಾಡುವುದೆಂಥಾ ಸರಸ?
ನಾಗರ ಪಂಚಮಿ ಹಬ್ಬಾ.... ಸೊಗಸಿನ
ಸಾಗರವೇ ಸರಿಯಬ್ಬಾ!
ನಾಗರ ಪಂಚಮಿ ಹಬ್ಬಾ.... ಒಲವಿನ
ಬೀಗವ ತೆಗೆಯುವ ಕಬ್ಬ!

## ನಿವೇದಕ

ಏನು? ನಾಗರಪಂಚಮಿಯ ಹಬ್ಬ! ಅಬ್ಬಾ, ನಮ್ಮ ನಾಡವರಿಗೆ ಎಷ್ಟೊಂದು ರಸಮಯವಾದ ದಿನವಿದು! ಭೂಮಿತಾಯಿ ಅನ್ನಾವತಾರ ಮಾಡಲಿರುವ ದೇವರನ್ನು ಬಸಿರಲ್ಲಿ ಧರಿಸಿರುವ ಸಂತಸದ ಸಮಯ. ಮುಂಗಾರಿಯ ಬಿತ್ತಿಗೆಯನ್ನು ಮುಗಿಸಿದ ಒಕ್ಕಲುಮಕ್ಕಳಿಗೆ ಹೊಲಗಷ್ಟದ ಬಿಡುವಿನ ಕಾಲ. ತನ್ನ ಬಳಗದೊಂದಿಗೆ ಬೆರೆತು, ಬಿಡುವಿನಲ್ಲಿ ಒಲವಿನ ಸವಿಬಾಳನ್ನು ಬಾಳಲು ಆ ಕರ್ಮಯೋಗಿಗಳ ಕುಲ ಬಯಸುವುದು. ಆದುದರಿಂದಲೇ ಅತ್ತೆಯ ಮನೆಗೆ ಹೋಗಿದ್ದ ಅಕ್ಕ–ತಂಗಿಯರನ್ನು ನಾಗರಪಂಚಮಿಯ ನೆವದಿಂದ ತವರೂರಿಗೆ ಕರೆಯಿಸಿಕೊಳ್ಳುವರು. ಹೊಸದಾಗಿ ಅತ್ತೆಯಮನೆಗೆ ಹೋಗಿ ಹೊಗೆಮನೆಯಲ್ಲಿ ಸಿಕ್ಕಂತಾಗಿದ್ದ ಅಕ್ಕತಂಗಿಯರು, ತವರಿನ ಸವಿಯೊಲವಿಗಾಗಿ ಹಾರಯಿಸಿ, ನಾಗರಪಂಚಮಿಯ ದಾರಿಯನ್ನೇ ಕಾಯುತ್ತಿರುವರು. ಅದೋ ಅಲ್ಲಿ ಕೇಳಿರಿ: ಹಳ್ಳಿಯ ಹೊಸ ಮೊದಲುಗಿತ್ತಿಯರ ಹೃದಯದ ಹಾತೊರಿಕೆಯನ್ನು:

ಪಂಚಮಿ ಬಂತೌ ಸನಿಯಾಕ— ಸನಿಯಾಕ !
ಅಣ್ಣಾ ಬರಲಿಲ್ಲ ಕರಿಯಾಕ !
ಅವರೇನವ್ವಾ ಸಾವಕಾರ್‍ರು....ಸಾವಕಾರ್‍ರು !
ನಾವೇನವ್ವಾ ಬಡವರು !
ಎಂಥಾ ಸೊಗಸೂ ತವರೂರು....ತವರೂರು,
ತಾಯಿ-ತಂದಿ ನಮ್ಮ ದೇವರು !
ಜುರು ಜುರು ಜೋಕಾಲಿ ಆಡವರೂ—ನಾವು
ಜುರು ಜುರು ಜೋಕಾಲಿ ಆಡವರು—
ಅರಳಿಟ್ಟು ತಂಬಿಟ್ಟು ತಿನ್ನವರು !
ಪಂಚಮಿ ಬಂತೌ ಸನಿಯಾಕ—ಸನಿಯಾಕ !
ಅಣ್ಣ ಬರಲಿಲ್ಲ ಕರಿಯಾಕ !

## ನಿವೇದಕ

ಪಾಪ, ತವುರನ್ನು ನೆನೆದು ಹಂಬಲಿಸುವ ತಂಗಿಯನ್ನು, ಅವರಣ್ಣ ನಾಗರಪಂಚಮಿಗಾಗಿ ಕರೆದು ತಂದಿರಲೇ ಬೇಕು. ಇದ್ಕೊ, ಇಲ್ಲಿ ಕೇಳಿರಿ; ಹಳ್ಳಿಯ ಸವಿಗಾರನೊಬ್ಬ ಪಂಚಮಿಯ ಪವಾಡವನ್ನು ಹಾಡುತ್ತಿದ್ದಾನೆ: —

(ಲಾವಣೀಕಾರನೊಬ್ಬ ಹಾಡುವನು.)

ಪಾಡವಾದ್ವ ಪಂಚಮಿಗೆ ನಾಡ ಮ್ಯಾಗಿನ ನಾರೇರೆಲ್ಲಾ
ಬರುವ್ರೋ ವಿಸ್ತಾರ ನೋಡರೀ !
ರೊಟ್ಟೀ ಬುತ್ತಿ ಕಟ್ಟಿಕೊಂಡು ಎತ್ತಿನ ವ್ಯಾಗ ಹತ್ತಿಕೊಂಡು
ಉಟ್ಟು ಬರುವ್ರೋರಲ್ಲಾ ಕರಿಸೀರಿ !
ಆಶಾಡಮಾಸಾ ಬಂದಿತವ್ವಾ ಖಾಸಾ ನಮ್ಮಣ್ಣ ಬರಲಿಲ್ಲ,
ಏಸ ದಿನಾ ನೋಡಲ್ಯವನ ದಾರಿ ? !
ಕಾರಹುಣ್ಣಿವೀ ಮರದಿನಾನ್ಕ ಕರಿಯಾಕ ಬರತೇನಂದಾ
ಯಾಕ ತಡದಾನೇನೋ ಅಣ್ಣ ದೊರಿ !
ಊರು ದೂರಾ ನೂರುಗಾವುದಾ ಹತ್ತಿದ ಹಳ್ಳೀ ಹಂತ್ಯಾಕಿಲ್ಲ,
ಯಾರ ಕೂಡಾ ಹೇಳಿ ಕಳಿಸಲಿ ?

ಸಾವುಕಾರ್ರು ನಮ್ಮವರು ಸಂತೀ ಪ್ಯಾಟೀ ಮಾಡವರಲ್ಲ,
ಯಾರ ಮುಂದ ಹೇಳಿ ಕಳುವಲಿ ?
ಚಿಂತಿಗೊಂಡು ಭ್ರಾಂತಳಾಗಿ ನಿಂತಿರುವ ಸಮಯದಲ್ಲೀ
ಅಣ್ಣ ಬಂದ್ವ ಮೂರುಚಂಜಿಲಿ ?
ಪಾಡವಾದ ಪಂಚಮಿಗೆ ನಾಡಮ್ಯಾಗಿನ ನಾರೇರೆಲ್ಲಾ
ಬರುವ್ರೋ ವಿಸ್ತಾರ ಏನ ಹೇಳಲಿ ?

## ನಿವೇದಕ

ಕೇಳಿದಿರಾ ? ಪಂಚಮಿಗಾಗಿ ನಮ್ಮ ಜನ ಪಡುವ ಹಂಬಲಿಕೆಯನ್ನು ? ಅಹುದು, ಯಾಕೆ ಹಂಬಲಿಸಬಾರದು ? ನಾಗರಪಂಚಮಿ ಕಿರಿಯರಿಗೂ ಹಿರಿಯರಿಗೂ, ಹೆಂಗುಸರಿಗೂ ಗಂಡುಸರಿಗೂ ಸಂಭ್ರಮದ ಹಬ್ಬ. ಅಣ್ಣ-ತಮ್ಮ, ಅಕ್ಕ-ತಂಗಿಯರ ಎದೆಯಲ್ಲಿ ಪ್ರೀತಿಯ ಗುಡಿಯನ್ನು ಕಟ್ಟುವ ಉತ್ಸವದಿನ. ತಂದೆ-ತಾಯಿಗಳು ಮಕ್ಕಳ ಉಲ್ಲಾಸವನ್ನು ಕಂಡು ಹಿರಿಹಿರಿ ಹಿಗ್ಗುವ ಹರ್ಷಯೋಗ. ಮನೆ-ಮನೆಯಲ್ಲಿಯೂ ನಾಲಗೆಗೆ ನೀರೂರಿಸುವ ಸವಿ-ಸವಿಯ ತಿಂಡಿ-ತಿನಿಸುಗಳು ! ಮೊಗಸಾಲೆ-ಮೊಗಸಾಲೆಗಳಲ್ಲಿಯೂ ತೂಗು-ಮಣೆ-ಉಯ್ಯಾಲೆಗಳು ! ಮರ-ಮರಗಳಿಗೂ ಜೋಲುವ ಜೋಕಾಲಿಗಳು, ಬಯಲು-ಬಯಲುಗಳಲ್ಲಿಯೂ ತಿರುಗುವ ತೊಟ್ಟಿಲ ಜೀಕಗಳು. ಎಲ್ಲೆಲ್ಲಿಯೂ ಉತ್ಸಾಹ.

ಇಂತಹ ನಾಗರಪಂಚಮಿಯನ್ನು ಜನರು ಎದುರು ನೋಡುತ್ತಿರುವಾಗ....ಅದು ಬಂದೇ ಬಿಟ್ಟಿತು. ನಾಳೆಯ ದಿನವೇ ನಾಗರಚವತಿ. ರಾಯರ ಮಗ ಪುಟ್ಟಣ್ಣ, ಸಂಜೆಯ ಶಾಲೆ ಬಿಟ್ಟಕೂಡಲೆ ಮನೆಗೆ ಬಂದಿದ್ದಾನೆ. ಮರುದಿನದ ಹಬ್ಬದ ಸಂಭ್ರಮ, ಆವನಿಂದ ಹಾಡು ಹಾಡಲಿಕ್ಕೆ ಹಚ್ಚಿದೆ —

**ಪುಟ್ಟ**:- ತಂದಿದ್ದ ಳಂಗಡಿ ಸಂಗಕ್ಕನು—ಕಾರಾ—
ಬುಂದೀ ಪುಠಾಣಿ ಮಂಡಕ್ಕಿಯನು !
ಬಂದಿದ್ದ ಳಾಚಾರ್ರ ತುಂಗಕ್ಕನು—ಕಟ್ಟಿ—
ಕೊಂಡು ಅಳ್ಳಿಟ್ಟವಲಕ್ಕಿಯನು !

( ಎಂದು ತನ್ನ ಪಠ್ಯಪುಸ್ತಕದೊಳಗಿನ ಹಾಡನ್ನು ಹೇಳುತ್ತ, ಪುಸ್ತಕದ ಚೀಲವನ್ನು ಗೋಡೆಯ ಮೊಳೆಗೆ ಹಾಕುವನು. ಎತ್ತ ಕಡೆಗೋ ನೋಡುತ್ತ ಪಾಟಿಯನ್ನೂ ಮೊಳೆಗೆ ಹಾಕುತ್ತಿರುವಾಗ, ಅದು ಕೆಳಗೆ ಬಿದ್ದು ಒಡೆದು ಚೂರಾಗುವುದು. ಆಗ ಅಲ್ಲಿಯೇ ನಿಂತಿದ್ದ ಅವನ ತಂಗಿ ರಂಗೂ, ಕುಣಿ-ಕುಣಿಯುತ್ತ ಹೇಳುವಳು.

**ರಂಗೂ:**– ಓಹೋ, ಪುಟ್ಟ್ಯಾನ ಪಾಟೀ ಒಡೀತೋ....ಒಡೀತೋ ! ನಾ ಹೇಳತೀನಿ ನಿಂದ್ರು : ಪುಟ್ಟ್ಯಾ ಪಾಟೀ ಒಡಕೊಂಡಾ ಅಂತ....ಅವ್ವನ ಮುಂದ !

**ಪುಟ್ಟ:**– ಹೋಗಲಿ ಬಿಡs, ಎಷ್ಟು ಬಡೀತೀ ಡೌಲು ! ಹೋಗು, ಹೇಳಿದರ ಹೇಳಿಕೋ ಹೋಗು ! ಈ ಪಾಟೀ ಮೊದಲs ಒಡದು ಹೋಗಿತ್ತು. ನಾಳೆ ಚವತೀ ಪಾಟೀ ಪೂಜಿಗೆ....ಅಪ್ಪ ಹೊಸಾ ಪಾಟೀ ಕೊಡಸತೀನಂತ ನನಗ ಹೇಳೇ ಹೇಳ್ಯಾನ !

**ರಂಗೂ:**– ಹೂಂ, ಕೊಡಸತೀನಂತ ಹೇಳ್ಯಾನ ! ನೀ ಹೀಂಗ ದಿನಾ ಒಂದು ಪಾಟೀ ಒಡಕೋತs ಇರು; ನಿನಗ ದಿನಾ ಒಂದು ಪಾಟೀ ಕೊಡಸತಾನ ಅಪ್ಪ....ಬಂದೀದಿ !

**ಪುಟ್ಟ:**– ಹಾಂಗಾದರ ನೀನು....? ದಿನಾ ಒಮ್ಮೆ ಬಳೀ ಹೆಚ್ಚಿಗೊಳ್ಳೂದಿಲ್ಲೇನು ! ಹೇಳಲಿಕ್ಕೆ ಬರತಾಳಿಲ್ಲೆ, ಮತ್ತ ! ಇದೇನs ರಂಗೀ, ನೋಡೋಣು: ಈವತ್ತ ಇಷ್ಟರಾಗs ಮತ್ತ ಬಳೀ ಹೆಚಿಗೊಂಡೀದೀ ಏನು ? ಓ ! ಹುಟಗ್ಯೆ ಚೆನ್ನೀ ರೊಟ್ಟೀಮಾಡೂ ಹೊನ್ನೀ ! ಹುಟಗ್ಯೆ ಚೆನ್ನೀ ರೊಟ್ಟೀ ಮಾಡೂ ಹೊನ್ನೀ ! ( ಎಂದು ತಾಳಹಾಕಿ ಹಾಡಿದಂತೆ ಮಾಡುವನು. )

**ರಂಗೂ:**– ಯಾಕೋ ಪುಟ್ಟ್ಯಾ ಲೊಟ್ಟ್ಯಾ ! ನನಗ ಹುಟಗ್ಯೆ ಚನ್ನೀ ಅಂತೀಯಾ ? ನಾಳಿಗೇ ನಾಗರ ಚವತಿ ಅದ....! ಅವ್ವ ನನಗ ರಾಜಾವರ್ಕೀ, ರಾಣೀಗೋಟೊ....ಥಂದಾಥಂದ ಬಳೀ ಇಡಸತೀನಂತ ಹೇಳ್ಯಾಳ !

**ಪುಟ್ಟ:**– ಹೂಂ, ಇಡಸತೀನಂತ ಹೇಳತಾಳ ! ನನ್ನ ಒಡಕ ಪಾಟೀ ಒಡದರ, ಅವ್ವನ ಮುಂದ ಹೇಳಿ ಬೈಸತೀನೀ ಅಂತ ಕುಣಿದಾಡಲಿಕ್ಕೆ ಹತ್ತೀದಿ ! ನಿಂದ್ರು, ನಿನಗಿಂತಾ ಮೊದಲ ನಾನs ಹೋಗಿ ಅವ್ವಗ ಹೇಳತೀನಿ : ರಂಗಿ ಕೈಯಾಗಿನ ಬಳೀ, ಬೇಕ-ಬೇಕಂತs ಹೆಚ್ಚಿಕೊಂಡಾಳs—ಅಂತ.

**ರಂಗೂ:**– ಹೇಳಿದರ ಹೇಳಿಕೋ ಹೋಗು ! ಅವ್ವ ನನ್ನ ಬೈಯೂದೇ ಇಲ್ಲ. ಪಂಚಿಮಿಾ ಹಬ್ಬ ಬಂದsದ; ಹೆಣ್ಣುಮಕ್ಕಳನ್ನ ಬೈದೂ ಅಂದೂ ಮನಸು ನೋಯಿಸಬಾರದೂ ಅಂತ ಅವ್ವನs ಹೇಳತಿದ್ಲು !

**ಪುಟ್ಟೆ:**– ಹಾಂಗಾದರ.... ಸಂಚವಿಾ ಹಬ್ಬದೊಳಗ ಗಂಡುಮಕ್ಕಳಿಗೆ ಬೈದೂ ಅಂದೂ ಮನಸು ನೋಯಿಸಬೇಕಂತ ಹೇಳ್ಯಾಳೇನು ಅವ್ವ? ಹಬ್ಬಾ ಅಂದ ಮ್ಯಾಲ, ಯಾರನ್ನೂ ಯಾರೂ ಬೈಯಲೂ ಬಾರದು.... ಬೈಯಿಸಲೂ ಬಾರದೂ — ಅಂತ ಅಪ್ಪ ಹೇಳ್ಯಾನ ನನಗ!

**ರಂಗೂ:**– (ಪಶ್ಚಾತ್ತಾಪದ ಧ್ವನಿಯಲ್ಲಿ) ಹೂಂ! ಹೀಂಗೇನು? ಹಾಂಗಾದರ.... ಅವ್ವಗ ನೀ ಪಾಟೀ ಒಡಕೊಂಡದ್ದು ಹೇಳೂದಿಲ್ಲ ಬಿಡು! 'ಪಾಪ, ಪುಟ್ಟಣ್ಣ ಎಡವಿಬಿದ್ದ; ಪಾಟೀ ಕೆಳಗ ಬಿದ್ದು ಒಡೀತೂ!' ಅಂತ ಹೇಳತೀನಿ!

**ಪುಟ್ಟೆ:**– ಶಾಬಾಸ್! ಅಂದರ ನೀ ನನ್ನ ತಂಗಿ ಖರೇ ನೋಡು! 'ನಮ್ಮ ರಂಗಣ್ಣಿ ಭಂಗಾರದಂಥಾ ಹುಡಿಗೀ' ಅಂತ ನಾನೂ ಎಲ್ಲಾರ ಮುಂದೂ ಹೇಳತೀನಿ! ಅಲ್ಲ; ರಂಗೂ! ಏನೋ ಘಮ್ ಘಮ್ ವಾಸನಿ ಬರಲಿಕ್ಕೆ ಹತ್ತೀದಲ್ಲಾ! ಯಾತರದಿದು?

**ರಂಗೂ:**– ಅಯ್ಯಃ! ಇಂವಗ ಗೊತ್ತಃ ಇಲ್ಲ. (ಮೆಲ್ಲಗೆ) ಅವ್ವ, ಅಡಿಗೀಮನ್ಯಾಗ, ತಂಬಿಟ್ಟು ಮಾಡಲಿಕ್ಕೆ ಹತ್ಯಾಳ; ಅದರದಿದು ವಾಸನಿ! ಇಷ್ಟೊತ್ತನಕಾ ಕೂತುಕೊಂಡು ನಾನಃ ಯಾಲಕ್ಕೀ ಸುಲಿದುಕೊಟ್ಟೆ. ಮತ್ತ....

**ಪುಟ್ಟೆ:**– ತಂಬಿಟ್ಟಿನುಂಡೀ ಮಾಡಲಿಕ್ಕೆ ಹತ್ತ್ಯಾಳ ಅವ್ವ? ಹೋ! ವಂದೇಮಾತರಂ! ಬಿಸಿ ಬಿಸಿ ತಂಬಿಟ್ಟಿನುಂಡಿ! ನಾ ಹೋಗಿ ಇಸಕೊಂಡು ಹೊಡೀತೀನಿ ನಿಂದ್ರು!

(ಓಡುತ್ತಲೆ ಅಡಿಗೆ ಮನೆಗೆ ಹೋಗುವನು. ಅಲ್ಲಿ ಪಾತೀಲಿ–ಸವುಟುಗಳ ಸಪ್ಪಳ ದೊಂದಿಗೆ ಅವ್ವ ಹಾಡುತ್ತ ಹಾಡುತ್ತ, ಉಂಡಿ ಮಾಡುವ ಕೆಲಸದಲ್ಲಿರುವಳು.)

## (ಅವ್ವನ ಹಾಡು)

"ಭಾಗ್ಯದಃ ಲಕ್ಷ್ಮೀ ಬಾರನ್ಮಾ!–ನಮ್ಮನ್ಮಾ ನೀ ಸೌ–
ಭಾಗ್ಯದ ಲಕ್ಷ್ಮೀ ಬಾರಮ್ಮ! ॥"

**ಪುಟ್ಟೆ:**– (ಓಡುತ್ತ ಬಂದು) ಅವ್ವಾ, ನನಗ ತಂಬಿಟ್ಟು ಕೊಡಃ!

**ಅವ್ವ**:– ಹೋಗೋ ಹುಚ್ಚುಖೋಡೀ! ಇಂದ ಹ್ಯಾಂಗ ಕೊಡತಾರೋ ತಂಬಿಟ್ಟು? ಇವು ನಾಗಪ್ಪನ ಮೀಸಲದ್ದೂ! ಇಂದ ಇವನ್ನ ತಿನ್ನೂಹಾಂಗಿಲ್ಲ!

**ಪುಟ್ಟ**:– ಹಾಂಗಾದರ....ಎಂದ ತಿನ್ನೂದವ್ವಾ ಇವನ್ನ?

**ಅವ್ವ**:– ನಾಳೆ ನಾಗರ ಚವತಿ,....ನೀವೆಲ್ಲಾರೂ ಎಣ್ಣೀಹಚ್ಚಿಕೊಂಡು ಎರಕೋಬೇಕು ....

**ಪುಟ್ಟ**:– ಎರಕೊಂಡಮ್ಯಾಲ ತಿನಬೇಕೇನು ತಂಬಿಟ್ಟು?

**ಅವ್ವ**:– ಎರಕೊಂಡಮ್ಯಾಲ ಅಲ್ಲೋ! ನಿನಗೊಂದು ತಿನ್ನೂದೇ ಹುಚ್ಚು! ಸೀ ತಿಂಡೀ ಅಂದರ ಆತು ನಿನಗ! ಯಾವಾಗ ಅದನ್ನ ತಿಂದೇನೋ ಅಂತ ಕೂತಿರತೀ! ಅದಕ್ಕ ಈಗ ಬೆಲ್ಲಾ, ಸಕ್ಕರೀ ಸಿಗದ್ಹಾಂಗ ಆಗ್ಯಾವ ನೋಡು!

**ಪುಟ್ಟ**:– ಸಿಗದ್ಹಾಂಗ ಏನ ಆಗತಾವ! ಅಂಗಡೀಕಾರ್‍ರು ಹೇಳಿದಷ್ಟು ಹಣಾ ಕೊಟ್ಟರ, ಕೇಳಿದಷ್ಟು ಬೆಲ್ಲಾ, ಸಕ್ಕರೀ ಸಿಗತಾವ! ಇರಲಿ ಬಿಡವ್ವಾ, ತಂಬಿಟ್ಟು ಯಾವಾಗ ಕೊಡತೀ ನನಗ?

**ಅವ್ವ**:– ನಾಳೆ ನಾವೆಲ್ಲಾರೂ ಮುತ್ತೈದೇರು ಕೂಡಿ ಹೋಗಿ, ಹುತ್ತಪ್ಪಗ ಹಾಲು ಎರದು, ಪೂಜೀಮಾಡಿ, ಅರಳಿಟ್ಟು–ತಂಬಿಟ್ಟು–ನೆನೆಗಡ್ಲಿ ನೇವೀದ್ಯಾ ತೋರಿಸಿ ಬರತೀವಿ; ಆ ಮ್ಯಾಲ ನಿನಗ ತಂಬಿಟ್ಟು ಸಿಗತ್ರದ ನೋಡು!

**ಪುಟ್ಟ**:– ಅಂದರ....ನಾಳೆ ಮಧ್ಯಾನದ ತನಕಾ ನನಗೇನೂ ಸಿಗೂ-ದಿಲ್ಲಾ–ಅನ್ನು!

**ಅವ್ವ**:– ನಾಗಪ್ಪನ ನೇವೀದ್ಯ ಆಗದ ಹೊರತು ಹ್ಯಾಂಗ ಸಿಕ್ಕೀತು ಹೇಳು!

**ಪುಟ್ಟ**:– ಒಳ್ಳೇ ನಾಗಪ್ಪ ಬಂದ ಬಿಡು! ಹೋಗಲಿ,....ಹೋಗಲಿ ಬಿಡವ್ವಾ, ಇನ್ನ ಈ ಉಂಡೀ ಮಾಡಿ, ಎಲ್ಲಿ ಇಡುವಾಕ ಇದ್ದೀದೀ ನೀನು?

**ಅವ್ವ**:– ಯಾಕ? ಕಳವಿಲೆ ತಿನಬೇಕಂತ ಮಾಡೀದೀ ಏನು? ನಾಗಪ್ಪನ ಮೀಸಲು ತಂಬಿಟ್ಟು; ಮೊದಲು ತಿಂದರ, ಮೈಗೆಲ್ಲಾ ತದ್ದು ಆಗತಾವ! ತಿಳೀತೇನು?

**ಪುಟ್ಟ**:– ತಪ್ಪು ಆಗತಾವ?....ಹಾಂಗಾದರ ಮೊನ್ನೆ ಮೊನ್ನೆ, ಅಪ್ಪಗ ನಾಲ್ಕಾರು ತಪ್ಪು ಆಗಿದ್ದೂ ಅಲಾ! ಅಂವ ನಾಗಪ್ಪನ ಮಿಾಸಲ ತಂಬಿಟ್ಟು ಮೊದಲು ತಿಂದಿದ್ದನೇನು ?

**ಅವ್ವ**:– ಖೋಡಿ ಹುಡುಗಾ! ಹಾಂಗ ಇಲ್ಲದ್ದs ಒಂದು ಮಾತಾಡ ಬಾರದು! ನೋಡು, ರಂಗೂ ಹ್ಯಾಂಗ ಶಾಣ್ಯಾ ಹುಡಿಗಿ ಇದ್ದಾಳ! ಆಕಿ ನಾಗಪ್ಪಗ ನೇವೀದ್ಯಾ ಆಗೂತನಕಾ ತಂಬಿಟ್ಟು ಬೇಡೂದಿಲ್ಲಾ—ಅಂತ ಖಂಡಿತ ಹೇಳಿಬಿಟ್ಟಾಳ!

**ರಂಗೂ**:– ಹೌದಪಾ ಪುಟ್ಟಣ್ಣಾ, ನಾನು ತಂಬಿಟ್ಟು ಎಂದೂ ಬೇಡೂದಿಲ್ಲ!

**ಪುಟ್ಟ**:– ಹೌದು, ನೀಯಾಕ ಬೇಡೀ ತಂಬಿಟ್ಟು? ನಿನಗ ಸೀ ಸೇರ-ತಿದರೇ ಎಲ್ಲೆ! ಈಗ ನಾಗಪ್ಪನ ನೇವೀದ್ಯಕ್ಕಂತ ಉಪ್ಪುಖಾರದ ಅವಲಕ್ಕೀ ಮಾಡಿದ್ದರ, ನೀ ಬೇಡತಿದ್ದ್ಯೋ ಇಲ್ಲೋ ತಿಳೀತಿತ್ತು!

**ರಂಗೂ**:– ನಾ ಹಾಂಗ ಎಂದೂ ಬೇಡತಿದ್ದಿಲ್ಲ. ನಾಗಪ್ಪನ ನೇವೀದ್ಯ ಆಗದ ಹೊರತು ತಿನಬಾರದಂದ ಮ್ಯಾಲ, ಹ್ಯಾಂಗ ಬೇಡತಾರ ನೋಡು! ನಾಳೆ ನಾನೂ ಹೊಸಾ ಪರಕಾರಾ ಉಟಗೊಂಡು,....ಜರದ ಪೋಲಕಾ ತೊಟಗೊಂಡು, ಕೊಳ್ಳಾಗ ಬಂಗಾರದ ಚೇನು ಹಾಕ್ಕೊಂಡು, ಹುತ್ತಪ್ಪಗ ಹಾಲು ಎರೀಲಿಕ್ಕೆ ಹೋಗತೀನಿ!

**ಪುಟ್ಟ**:– ಹುತ್ತಪ್ಪಗರೇ ಹಾಲು ಎರೀ ದತ್ತಪ್ಪಗರೇ ಹಾಲು ಎರೀ! ನಿನಗ ಹಾಲು ಎರೀಲಿಕ್ಕೆ ನಾ ಎಲ್ಲೆ ಬ್ಯಾಡ ಅಂತೀನಿ? ನನಗೊಂದು ತಂಬಿಟ್ಟು ಸಿಕ್ಕರ ಸಾಕು! ಅವ್ವಾ, ತಪ್ಪಿಗೆ ಔಷಧಾ ಹಚಿಕೊಂಡರ ಹೋಗತಾವಲ್ಲ? ಅಪ್ಪಗ ತರಿಸಿದ ಮುಲಾಮು ಇನ್ನೂ ಅದ ಅಲ್ಲೆ....ಕಪಾಟಿನೊಳಗ!

**ಅವ್ವ**:– ಭಾಳ ತಿನಸುಬಕ್ಕ ಹುಡುಗನಪ್ಪಾ ಪುಟ್ಯಾ ನೀನು! ಅಲ್ಲೋ, ಮಿಾಸಲ ತಂಬಿಟ್ಟು ತಿಂದು, ತಪ್ಪ ಆದರ, ಆ ಮುಲಾಮ್ ಹಚ್ಚಿ ಕಳಕೋ ಬೇಕಂತೀ ಏನು? ತಿಳೀತು ಬಿಡು, ಅಲ್ಲೋ ಬಕಾಸುರಾ, ನಾಳೆ ಮಧ್ಯಾನ ತನಕಾ ನಿನಗ ತಡೀಲಿಕ್ಕೆ ಆಗೂದಿಲ್ಲೇನು?

**ಪುಟ್ಟ**:– ಹಾಂಗಲ್ಲs ಆವ್ವಾ!........

**ಅವ್ವ**:– ಹಾಂಗ ಅಲ್ಲದಿದ್ದರ ಇನ್ನ ಹ್ಯಾಂಗ? ನಾನು ನಿನ್ನ ಅವ್ವ ಇದ್ದೀನಿ ತಿಳೀತೇನು? ನಿನ್ನ ಗುಟ್ಟು ನನಗ ಗೊತ್ತಾಗೂದಿಲ್ಲಃ? ಇಲ್ಲಿ ನೋಡು, ಪುಟ್ಟಣ್ಣಾ, ನೀನು ನಾಗಪ್ಪನ ವರಪ್ರಸಾದದಿಂದ ಹುಟ್ಟಿದ ಹುಡುಗ! ನಾಳೆ ನೀನೂ ನಾಗಪ್ಪನ ಪೂಜೀ ಮಾಡಬೇಕು. ಅದನ್ನೆಲ್ಲಾ ಬಿಟ್ಟು ಹೀಂಗೆಲ್ಲಾ ಹುಡುಗಾಟ ಮಾಡಿದರ, ನಾಗಪ್ಪ ಸಿಟ್ಟಿಗೇಳತಾನ.... ಎಲ್ಲಾರನ್ನೂ ಕಚ್ಚಲಿಕ್ಕೆ....ತನ್ನ ಹಾವಿನ ಬಳಗಾನಃ ಕಳಸತಾನ!

**ಪುಟ್ಟ**:– ಅಬ್ಬಬ್ಬಾ! ಹೀಂಗೇನು? ನಾಗಪ್ಪ ಅಂದರ ದೇವರೇನು?

**ಅವ್ವ**:– ಮತ್ತೇನಂತ ತಿಳಿದೀದಿ? ಅಂವ ದೇವರಂತಃ ನಾಗರ ಚವತೀ ದಿನಾ ನಾಗರ ಪಂಚಮೀ ದಿನಾ ಅವನ ಪೂಜೀ ಮಾಡೂದು! ಪೂಜೀ ಮಾಡಿ, ತಂಬಿಟ್ಟಿನ ನೈವೇದ್ಯಾ ಕೊಟ್ಟರ, ಅಂವ ನಮ್ಮ ಕುಟುಂಬಕ್ಕ ಕಲ್ಯಾಣ ಮಾಡತಾನ! ಸಂತಾನ....ಸಂಪತ್ತು ಕೊಡತಾನ!

**ಪುಟ್ಟ**:–ಇಷ್ಟೆಲ್ಲಾ ಮಾಡತಿದ್ದರ, ನಾ ಈಗೇನೂ ತಂಬಿಟ್ಟು ಬೇಡೂದಿಲ್ಲ ಬಿಡವ್ವಾ! ನಾಳೆ ನೇವೇದ್ಯಾ ಆದ ಮ್ಯಾಲಃ ಕೊಟ್ಟೀಯಂತ!

**ಅವ್ವ**:- ನಮ್ಮ ಪುಟ್ಟಣ್ಣ ಶ್ಯಾಣ್ಯಾ ಹುಡುಗ! ರಂಗೂ, ಅಲ್ಲೆ ಮಾಡದಾಗ....ಒಂದು ಬೇಸನುಂಡಿ ಅದ; ಅದನ್ನ ಪುಟ್ಟಗ ಕೊಡವ್ವಾ!

**ಪುಟ್ಟ**:– ಏನು? ಬೇಸನುಂಡೇ! ಹುಃಯ್ಯಾಪಾ! ಇಂದ ಬೇಸನುಂಡಿ; ನಾಳೆ ತಂಬಿಟ್ಟಿನುಂಡಿ! ಉಂಡೀಮ್ಯಾಲ ಉಂಡಿ!

**ಅವ್ವ**:– ರಂಗೂ, ನೀ ಅಂವಗ ಉಂಡೀ ಕೊಟ್ಟು ಇಲ್ಲೇ ಕೂತುಕೋ! ನಿಮ್ಮ ಪುಸ್ತಕದೊಳಗ ಅದಃ ಅಲ್ಲಾ: 'ನಾಗರ ಹಾವೇ' ಅಂತ ಕವಿತಾ? ಅದನ್ನ ಇಂಪಾಗಿ ಹೇಳವ್ವಾ!

**ರಂಗೂ**:–( ಕೆಮ್ಮಿ ದನಿ ಸರಿಪಡಿಸಿಕೊಂಡು ) ಪುಟ್ಟಣ್ಣಾ ತಕ್ಕೊಳ್ಳಪಾ ಉಂಡೀ! ಹುಂ, ಹೇಳತೇನಿ ಕೇಳವ್ವಾ!

( ಇಬ್ಬರೂ ಹಾಡುವರು )

ನಾಗರ ಹಾವೇ ಹಾವೊಳು ಹೂವೇ!
ಬಾಗಿಲ ಬಿಲದಲಿ ನಿನ್ನಯ ಠಾವೇ!

ಕೈಗಳ ಮುಗಿವೆ, ಹಾಲನ್ನೀವೆ,
ಬಾಬಾ ಬಾಬಾ—ಬಾಬಾ ಬಾಬಾ !
ಹಳದಿಯ ಹೆಡೆಯನು ಬಿಚ್ಚೋ ನಾಗಾ !
ಹೊಳಹಿನ ಹೊಂದಲೆ ತೂಗೋ ನಾಗಾ !
ಕೊಳಲನ್ನೂದುವೆ ಲಾಲಿಸು ರಾಗಾ
ನೀನೀ ನೀನೀ—ನೀನೀ ನೀನೀ !

**ಪುಟ್ಟ**:– ತಂಬಿಟ್ಟು... ತಂಬಿಟ್ಟೊ....ನಾಳಿಗೆ ತಿಂತೇನ್ ತಂಬಿಟ್ಟೊ !

( ದೂರದಲ್ಲಿ )

ಬಾ, ಶ್ರಾವಣ ಶುಭ ಸಮೀರ ಬಾರಾ !
ನಿನ್ನ ಗತಿಯು ಗೆಜ್ಜೆನಾದ
ಹೆಣ್ಣುಗಂಡುಗಳಿಗೆ ಮೋದ
ಶೃಂಗಾರದ ಸುಖೋನ್ಮಾದ
ಸೃಷ್ಟಿಯ ಸಹಕಾರಾ !
ಬಾ, ಶ್ರಾವಣ ಶುಭಸಮೀರ ಬಾರಾ !

---

# ಪಾತ್ರಗಳು



| | |
|---|---|
| ಮಠದ ಮಾಸ್ತರು | ಒಬ್ಬ ಅಧ್ಯಾಪಕರು |
| ಶೀನಿ | ಡಾಕ್ಟರರ ಮಗ |
| ನಾನಿ | ವಕೀಲರ ಮಗ |
| ಗುಂಡ | ಶಾಲೆಯ ಮಾಸ್ತರ ಮಗ |
| ಗೋಪಿ | ಕುಲಕರ್ಣಿಯ ಮಗ |
| ದತ್ತ | ಜಮೀನ್ದಾರರ ಮಗ |
| ಕಿಟ್ಟು | ಹಳ್ಳಿಯ ಹುಡುಗ |
| ರಂಗ | ಚಿನಿವಾಲರ ಹುಡುಗ |
| ರಾಜ | ನಿಜವಾದ ಹುಡುಗ |

# ನಾನೇನಾಗುವೆ?



## ಪರಿಚಯ

ಮಾಧ್ಯಮಿಕ ಶಾಲೆಯ ಪರೀಕ್ಷೆಗಳು ಮುಗಿದುವು. ವಿಜಯ ಹೈಸ್ಕೂಲಿನ ಎರಡನೆಯ ತರಗತಿಯ ಕೆಲವು ವಿದ್ಯಾರ್ಥಿಗಳು, ತಮ್ಮ ತರಗತಿಯ ಶಿಕ್ಷಕರಾದ ಮಠದ ಮಾಸ್ತರರೊಂದಿಗೆ, ನುಗ್ಗಿಕೇರಿಗೆ ವಿನೋದವಿಹಾರಕ್ಕೆಂದು ಬಂದಿದ್ದಾರೆ. ವಿದ್ಯಾರ್ಥಿಗಳಲ್ಲಿ ವಕೀಲರ ಮಗ ನಾನಿ, ಡಾಕ್ಟರರ ಮಗ ಶೀನಿ, ಮಾಸ್ತರರ ಮಗ ಗುಂಡು, ಕುಲಕರ್ಣಿಯರ ಗೋಪಿ, ದೇಶಪಾಂಡೆ ದತ್ತ, ಕರಜಗಿ ಕಿಟ್ಟು, ನಾಯಕರ ರಂಗ, ನಂದನಳ್ಳಿ ರಾಜ ಇವರೆಲ್ಲ ಇದ್ದಾರೆ. ತಮ್ಮ ವಿನೋದವಿಹಾರದ ಕಾರ್ಯಕ್ರಮ ಮುಗಿಸಿಕೊಂಡು, ಎಲ್ಲರೂ ಗುಡಿಯ ಪವುಳಿಯಲ್ಲಿ ಹರಟೆ ಹೊಡೆಯುತ್ತ ಕುಳಿತಿದ್ದಾರೆ.

**ಮಠದ ಮಾಸ್ತರು:**– ಇಂದಿನ ಕಾರ್ಯಕ್ರಮ ಎಲ್ಲಾ ಭಾಳ ಮಜಾ-ದಾರೀ ಆತು—ಯಾಕ್ರೆಪಾ ? ಹೀಂಗ ಮ್ಯಾಲಿಂದ ಮ್ಯಾಲ ಪ್ರವಾಸದ ಕಾರ್ಯ ಕ್ರಮ ನಡೀತಿರಬೇಕು ನೋಡ್ರಿ !

**ರಾಜ:**–ನಡೀತಿರಬೇಕಲ್ಲಾ ಖರೇನ್ರೀ ಮಾಸ್ತರು ! ಮ್ಯಾಲಿಂದ ಮ್ಯಾಲ ಹಿಂತಾ ತಿಂಡಿ–ತಿನಸೂ ಕಟಿಕೊಂಡು ಬರಬೇಕಂದರ....ಸಾಗಬೇಕು ಹ್ಯಾಂಗ ? ನಮ್ಮಂಥವರ ಮನ್ಯಾಗಂತೂ ಒಂದು ದಿನಾ ಹೀಂಗ ಕಟಿಗೊಂಡು ಬಂದರ, ಮೂರು ದಿನಾ ಬರೇ ನೀರು ಕುಡದು ಇರಬೇಕಾಗತದ !

**ಶೀನಿ:**– ಈ ರಾಜಂದೊಂದು ಏನಾದರೂ ಅಡ್ಡಡ್ಡ ಮಾತು ! ಅದ್ಯಾ-ಕಪಾ, ಬರೇ ನೀರ ಕುಡದು ಇರಬೇಕಾಗತದ ?

**ರಾಜ:**– ನಿನಗೇನಪಾ ಮಗನ ! ನಿಮ್ಮಪ್ಪ ಡಾಕ್ಟರು....ಮಂದೀ ಮೈಗೆ....ಮಂಡ ಸೂಜೀ ಚುಚ್ಚಿ ಚುಚ್ಚಿ, ನೋಟಿನ ಪುಡಿಕಿ ತರತಾನ.... ನಿನಗ ಏನದ ಬಿಸಿ ?

( ಹುಡುಗರೆಲ್ಲರೂ ನಗುವರು. )

**ಮ. ಮಾಸ್ತರು:-** ಇರಲಿ ಬಿಡ್ರ್ಯೊ! ಇಲ್ಲದ ವಾದದೊಳಗ ಯಾಕ ಹೊತ್ತು ಕಳೀತೀರಿ? ನಮ್ಮ ಭಾರತ, ಈಗ ಸಂಪೂರ್ಣ ಸ್ವತಂತ್ರ ಆಗೇದ; ಇನ್ನಮ್ಯಾಲ ಎಲ್ಲಾರೂ ಸುಖದಿಂದ ಇರಬಹುದು! ನಿಮಗೊಂದು ಹಾಡು ಕಲಿಸಿದ್ದೆನಲ್ಲ; ' ಚಿರಸುಖದರಮನೆಯು ನಮ್ಮ ಭರತಮಾತೆಯು ? ' ಅದನ್ನ ಈಗ ಎಲ್ಲಾರೂ ಕೂಡಿ ಹೇಳ್ರಿ ನೋಡೋಣ!

( ಎಲ್ಲರೂ ಒಟ್ಟುಗೂಡಿ ಹಾಡುವರು )

ಚಿರಸುಖದರಮನೆಯು ನಮ್ಮ ಭರತ ಮಾತೆಯು !
ಸುರ–ಮುನಿ–ಜನ ಮನರಮಿಸುವ ಪರಮಪೂತೆಯು !
ಸಿರಿವನಿತೆಯ ಶ್ರಮ ಶಮಿಯಿಪ ಶಯನಸದನವು,
ಸರಸತಿ ನಗೆಮೊಗದಿ ನಲಿವ ನಾಟ್ಯನಿಲಯವು,
ಗಿರಿಜೆಯು ದುರುಳರನು ತರೆಯೆ ನಿಂತ ವಲಯವು.
ಸುರಸತಿಯರು ಸೇಂ ಸುಖಿಪ ಸುಮನಸವನವು ! ॥ ೧ ॥

ಮಧುರ ತರದ ಗೋರಸ-ಘೃತ-ಫಲಗಳುಣಿಸುತ—
ಸುಧೆಯುತೆರದ ಸುರನದಿಜಲ ಕುಡಿಸಿ ತಣಿಸುತ—
ಹೊದೆಯಲುಡಲು ವಿಮಲವಾದ ವಸನವೀಯುತ—
ಮುದವನೀವ ಮಾತೆಗೆ ಜಯಜಯವು ಸಂತತ ! ॥ ೨ ॥

**ಮ. ಮಾಸ್ತರು:–** ಸರಿ! ಸ್ವಾರಸ್ಯವಾಗಿ ಹಾಡಿದಿರಿ! ಇಂಥಾ ಭರತ ಮಾತೆಯ ಮಕ್ಕಳು ನೀವೆಲ್ಲಾ! ನಿಮಗೇನು ಕಡಿಮಿ ಇನ್ನಮ್ಯಾಲ? ಆದರ ನೀವೆಲ್ಲಾ ದೊಡ್ಡವರಾಗಿ, ಆ ತಾಯಿಯ ಸೇವಾ ಮಾಡೂದು ಮಾತ್ರ ತುಂಬಾ ಅಗತ್ಯ ಏನ್ರೆಪಾ! ನಮ್ಮ ತಾಯಿ ನಮ್ಮ ಹೊಟ್ಟೆಗೆ ಹಾಕತಾಳಂತ— ನೀವೆಲ್ಲಾ ಕೈ–ಕಾಲು ಅಗಳಾಡಿಸದs ಕೂತುಕೊಂಡು ಬಿಟ್ಟರ, ನಿಮ್ಮ ಭಾರತಮಾತೆಗೂ ಸುಖಾ ಇಲ್ಲಾ—ನಿಮಗೂ ಸುಖಾ ಇಲ್ಲಾ !

**ಎಲ್ಲರೂ:–** ಹೌದರಿ ಮಾಸ್ತರ್, ನೀವು ಹೇಳೂದು ಅಗದೀ ಖರೇ ಅದನ್ರಿ!

**ಮ. ಮಾಸ್ತರು:–** ಶಾಬಾಸ್! ನನ್ನ ಮಾತು ಖರೇ ಅನಸ್ತsದೋ ಇಲ್ಲೋ ? ಹಾಂಗಾದರ, ಈಗ ಇಲ್ಲೆ ದೇವರ ಸಾನ್ನಿಧ್ಯದೊಳಗ, ಒಬ್ಬೊಬ್ಬರs ಹೇಳ್ರಿ : ದೊಡ್ಡವರಾದ ಮ್ಯಾಲ ನೀವು ಏನಾಗಬೇಕಂತ ವಿಚಾರ ಮಾಡೀರಿ ?

ಈಗ ಮೊದಲ ನಾನೀ ಹೇಳಲಿ ? ಏನಾಗಬೇಕಂತ ನೀ ಸಂಕಲ್ಪ ಮಾಡೀದೀ– ಹೇಳಪಾ ನಾನೀ !

**ನಾನಿ:**– ನಾ ನೋಡ್ರಿ ಮಾಸ್ತರs ! ಹೆಸರಾದ ದೊಡ್ಡ ವಕೀಲ ಆಗಬೇಕಂತ ಮಾಡೀನಿ !

**ಮ. ಮಾಸ್ತರು:**– ಅದ್ಯಾಕಪಾ ?

**ರಾಜ:**– ಅದ್ಯಾಕಂದ್ರ ಏನ್ರೀ ಮಾಸ್ತರ್ ! ಇವರ ಅಪ್ಪ, ಸಣ್ಣ ವಕೀಲೀ ಮಾಡಿ-ನೂರು ಮನಿತನಾ ಮುರದಾನ ! ಇಂವ ಇನ್ನ ದೊಡ್ಡ ವಕೀಲೀ ಮಾಡಿ ಸಾವಿರ ಮನಿತನಾ ಮುರಿಯಾಂವ ! ಬಾಪಸೇ ಬೇಟಾ ಅಧಾಯಿ !

( ಹುಡುಗರೆಲ್ಲರೂ ನಗುವರು )

**ಮ. ಮಾಸ್ತರ:**– ಇರಲಿ, ನೀ ಸುಮ್ಮನ ಕೂಡೋ ! ಹೂಂ ನಾನೀ, ಹೇಳು ನೀನು !

**ನಾನಿ:**– ವಕೀಲೀ ಅಂದರ ಸ್ವತಂತ್ರ ಉದ್ಯೋಗ; ಸಮಾಜದೊಳಗ ಮರ್ಯಾದಿ ಹೆಚ್ಚು ! ಮಹಾತ್ಮಾ ಗಾಂಧೀ ಮುಂತಾದ ದೇಶಭಕ್ತರೆಲ್ಲಾ ವಕೀಲೀ ಮಾಡೇ ಹೆಸರು ಗಳಿಸಿದರು. ವಕೀಲೀ ಮಾಡಿದರ ಬೇಕಾದಷ್ಟು ದುಡ್ಡು ಸಿಗತsದ ! ಮನ್ಯಾಗ ಮೋಟರು ಇಡಬಹುದು....ರೇಡಿಯೋ ಇಡ ಬಹುದು........

**ರಾಜ:**– ( ನಡುವೆಯೇ ಬಾಯಿಹಾಕಿ ) ಪಕ್ಷಗಾರರ ಪಕ್ಷಾ, ಶ್ರಾದ್ಧಾ ಮಾಡಿಸಬಹುದು ! ಮ್ಯಾಲ ಯಾರ ಸೋತರ ಸೂತಕಿಲ್ಲ; ಗೆದ್ದರ ವೃದ್ಧಿ ಇಲ್ಲ ! ಊರು ಸುಟ್ಟರೂ ಹೊರಗ ಇರೂ ಹಣಮಪ್ಪನ್ಹಾಂಗ, ನಿಶ್ಚಿಂತಿಂದ ಇರಲಿಕ್ಕೆ ಬರತsದ !

( ಎಲ್ಲ ಹುಡುಗರೂ ನಗುವರು. )

**ಮ. ಮಾಸ್ತರ:**–ನೀ ಸುಮ್ಮನಿರೋ ರಾಜ ! ಏ ಶೀನೀ, ನೀ ಹೇಳಪಾ ! ನೀ ಏನಾಗಬೇಕಂತ ಅಪೇಕ್ಷಾ ಮಾಡತೀ ?

**ಶೀನಿ:**– ಕರ್ನಾಟಕದೊಳಗ ಸುಪ್ರಸಿದ್ಧ ಡಾಕ್ಟರ್ ಆಗಬೇಕಂತ ಅನಿಸತsದರಿ !

**ರಾಜ:**– ಹಂ ಹಂ! ದಿನಕ್ಕ ಎಷ್ಟ ಹೆಣಾ ಕೆಡವಿದರ, ಸುಪ್ರಸಿದ್ಧ ಡಾಕ್ಟರಾಗತಾರೋ ಶೀನಿ?

( ಮತ್ತೆ ಎಲ್ಲರೂ ನಗುವರು. )

**ಮ. ಮಾಸ್ತರು:**– ಏ ರಾಜಾ, ನೀ ಬಾಯಿಮುಚ್ಚಿ ಕೂಡೋ! ಇರಲಿ, ಶೀನೀ, ಹೇಳು! ಡಾಕ್ಟರಾಗಬೇಕಂತ ಯಾಕ ಅನಸತದಪಾ ನಿನಗ?

**ಶೀನಿ:**– ಒಬ್ಬರ ಕೈಯಾಗ ಆಳಾಗಬೇಕಾಗಿಲ್ಲ. ಸ್ವತಂತ್ರ ಉದ್ಯೋಗ! ಹೆಚ್ಚು ಶ್ರಮಾ ಮಾಡಬೇಕಾಗಿಲ್ಲ! ಈಗಿನ ದಿವಸದೊಳಗೇನ್ರಿ? ಬ್ಯಾನಿಗಳಿಗೂ ಏನೂ ಕಡಿಮಿ ಇಲ್ಲ. ಡಿಗ್ರೀ ಪಡಿದು, ಡಾಕ್ಟರ್ ಆಗಿ, ಸ್ವತಂತ್ರ ದವಾಖಾನೀ ತಗದರ, ರೋಗಿಗಳಿಗೇನೂ ಕೊರತಿ ಇಲ್ಲ....

**ರಾಜ:**– (ನಡುವೆ ಬಾಯಿ ಹಾಕಿ) ರೋಗಿ ಸತ್ತರೂ ರೊಕ್ಕ ಸಿಗತಾವ; ಬದಿಕಿದರೂ ರೊಕ್ಕ ಸಿಗತಾವ! ಮತ್ತ ಹೀಂಗೂ ಹೇಳಬಹುದು; ಈ ಡಾಕ್ಟರ ಕೈಯಿಂದ ಔಷಧ ತಗೊಂಡು ಸತ್ತವನೂ ಬದಿಕಿದ್ದಾಂಗ! ಅಪ್ಪಿತಪ್ಪಿ ಬದಿಕಿ ಉಳಿದರ, ಇವರ ಬಿಲ್ಲು ಪ್ರತಿನಿತ್ಯಾನೂ ಅವನ ಪ್ರಾಣಾ ತಗೀತಿರತಾವ!

( ಎಲ್ಲರೂ 'ಹಾ ಹಾ ಹಾ' ಎಂದು ನಗುವರು. )

**ಮ. ಮಾಸ್ತರು:**– ನೀ ಭಾಳ ಅಧಿಕಪ್ರಸಂಗಿಪಾ ರಾಜಾ! ಸುಮ್ಮನಿರಲಿಕ್ಕೆ ನೀ ಏನು ತೊಗೊಳ್ತೀ? ಏ ಗುಂಡಾ, ನೀ ಹೇಳಪಾ ಏನಾಗಬೇಕಂತ ಮಾಡೀದೀ ನೀನು?

**ರಾಜ:**- ಅಂವ ಇನ್ನೇನಾಗತಾನ್ರಿ! ಹೇಳಿ ಕೇಳಿ ಕನ್ನಡ ಸಾಲೀ ಮಾಸ್ತರ ಮಗ! ಇವರಪ್ಪ 'ರ ಠ ಈ ಕ' ಕಲಿಸಿ ಮುದುಕರಾದರು. ಇಂವ ಇನ್ನ ದೊಡ್ಡಾಂವಾಗಿ, ರಾಟೀ ನೂಲಲಿಕ್ಕೆ ಕಲಸಾಂವ! 'ತಿರುಗು ನನ್ನ ರಾಟಿ ಚಿನ್ನ, ತಿರುಗು ಗರಗರ....ತಿರುಗು ಗರಗರ!' ಅಂತ ಹಾಡು ಕಲಿಸಿ, ಹುಡುಗರ ತಲೀನೂ ತಿರಗಸಾಂವ!

( ಹುಡುಗರೆಲ್ಲರೂ ಗಟ್ಟಿಯಾಗಿ ನಗುವರು. )

**ಮ. ಮಾಸ್ತರು:**– ಇರಲಿ ತಡಿಯೋ, ಹುಂ, ಹೇಳೋ ನೀ ಗುಂಡಾ!

**ಗುಂಡ:**– ನನಗ ಸ್ಕೂಲ್ ಇನಸ್ಪೆಕ್ಟರ್ ಆಗಬೇಕಂತ ಇಚ್ಛಾ ಅದರ್ರಿ ! ಪಾಪ, ಕನ್ನಡಸಾಲೀ ಮಾಸ್ತರರನ್ನೆಲ್ಲಾ—ಈ ಇನಸ್ಪೆಕ್ಟರರು ಬಂದು ಬಂದು ಪ್ರಾಣಾ ತಗೀತಿರತಾರ! ನಾನು ಒಳ್ಳೇ ಇನಸ್ಪೆಕ್ಟರಾಗಿ, ಮಾಸ್ತರ ಜನರನೆಲ್ಲಾ ಒಳ್ಳೇ ರೀತಿಯಿಂದ ನೋಡೂ ಆದರ್ಶ ಇನಸ್ಪೆಕ್ಟರ್ ಆಗಬೇಕಂತ ಮಾಡೀನಿ!

**ದತ್ತ:**– ಮಗನs ! ನಿನ್ನಂಥವರು ಇನಸ್ಪೆಕ್ಟರಾದರ ಮುಗದs ಹೋತ್ಯು. ಈ ಮಾಸ್ತರ ಜನಾ ಮನ್ಯಾಗs ಕೂತು ಸಂಬಳಾ ತಿಂತಾರ!

**ರಾಜ:**– ಅದಕಲ್ಲಲೇ ದತ್ತ್ಯಾ ಇಂವ ಇನಸ್ಪೆಕ್ಟರ್ ಆಗೋದು! ನಾಕು ತಿಂಗಳ ಹಳ್ಳೀಸಾಲಿ ತಿರಿಗಿ ಬಂದರ, ವರ್ಷದ ಸಾಮಾನೆಲ್ಲಾ ಸಂಗ್ರಹ ಆಗತsದ; ಬಂದ ಪಗಾರೆಲ್ಲಾ ಪಾಕೀಟಿನೊಳಗ ಉಳಿತsದ!

( ಮತ್ತೆ ಎಲ್ಲ ಹುಡುಗರೂ ನಗುವರು. )

**ಮ. ಮಾಸ್ತರ:**– ಏ ರಾಜಾ, ನೀ ಏನು ಸುಮ್ಮನs ಕೂಡತೀಯೋ ಇಲ್ಲಿಂದ ಎದ್ದು ಹೋಗತೀಯೋ ? ಗೋಪಿ, ನೀ ಹೇಳಿನ್ನ! ಮುಂದ ಏನಾಗ ಬೇಕಂತ ವಿಚಾರ ಮಾಡೀದೀಯುಪಾ !

**ಗೋಪಿ:**– ಒಂದು ತಾಲೂಕಿಗೆ ಮಾಮಲೇದಾರ ಆಗಬೇಕಂತ ನನಗ ಅನಸತsದರಿ !

**ರಾಜ:**– ಭಪ್ಪರೇ ಕುಲಕರ್ಣೇ ಮಗನ! ತಾಲೂಕಿನ ರೈತರ ಕೋಟಿ ಕಲ್ಯಾಣನs ನೋಡು ನಿನ್ನಿಂದ!

( ಹುಡುಗರೆಲ್ಲ ನಗುತ್ತಿರುವಾಗಲೆ )

**ಮ. ಮಾಸ್ತರು:**– ಶ್ಯೂ ಶ್ಯೂ! ಸುಮ್ಮನಿರ್ರಿ! ಹುಂ, ಹೇಳು! ಮಾಮಲೇದಾರ ಆಗಿ ಏನು ಮಾಡಾಂವಪಾ ನೀನು ?

**ಗೋಪಿ:**– ಇಡೀ ತಾಲೂಕಿನ ರಾಜ್ಯ ಕೈಯೊಳಗ! ಬೇಕಾದ್ದ ಮಾಡ ಬಹುದು! ಎಲ್ಲಾ ಹಳ್ಳೀ ಸುಧಾರಿಸತೀನಿ! ಲಂಚಾ ಪಂಚಾ ನಡೀದ್ಹಾಂಗ ಮಾಡತೀನಿ! ಮುಂದಿಗೆಲ್ಲಾ ಸರಿಯಾಗಿ ಕಾಳು–ಕಡಿ ಸಿಗೂಹಾಂಗ ವ್ಯವಸ್ಥಾ ಮಾಡತೀನಿ! ತಾಲೂಕಿಗೆ ತಾಲೂಕನ್ನ ಮಾದರೀದು ಮಾಡಿ ತೋರಿಸಿ, ದೇಶದ ಉನ್ನತಿಗೆ ಸಹಾಯ ಮಾಡತೀನಿ!

**ರಾಜ:**– ಭಪ್ಪರೆ, ದೇಶಭಕ್ತನ ಮೊಮ್ಮಗನs ! ಮೊದಲ ನಿನ್ನ ಪಾಠೀ ತಿಕ್ಕಿ ತೊಳಕೊಳ್ಳಲಿಕ್ಕೆ ಕಲಿ ! ಆಮೇಲೆ ದೇಶದ ಉನ್ನತೀ ಮಾಡೀಯಂತ !

( ಎಲ್ಲರೂ ದೊಡ್ಡದಾಗಿ ನಗುವರು )

**ಮ. ಮಾಸ್ತರು:**–ಇರಲಿ ಬಿಡ್ರ್ಯೋ ! ಅಂವ್ಹೊಬ್ಬ ಬಾಯಿಗೆ ಬಂದದ್ದು ಭಕಾಸತಾನ; ನೀವೆಲ್ಲಾ ನಗಲಿಕ್ಕೆ ಸುರೂ ಮಾಡತೀರಿ ! ಏ ದತ್ತಾ, ಇನ್ನ ನಿನ್ನ ಸರತಿ ! ನೀ ಏನಾಗಬೇಕಂತ ಯೋಚನಾ ಮಾಡೀದೀಯಪಾ ?

**ದತ್ತ:**– ಈಗ ಟೆನೆನ್ಸಿ ಕಾಯಿದೇ ಆಗಿ, ನಮ್ಮ ಜಮೀನದಾರರಿಗೆಲ್ಲಾ ಭಾಳ ತ್ರಾಸ ಆಗೇದ. ಮೊದಲಿನ ಅರ್ಧದಷ್ಟು ಸುದ್ಧಾ ನಮಗ ಹೊಲದ ಉತ್ಪನ್ನ ಸಿಗವೊಲ್ದು ! ಅದಕ್ಕ ಅಸೆಂಬ್ಲೀ ಮೇಂಬರಾಗಿ ಹೋಗಿ, ಅಲ್ಲಿ ನಮ್ಮದೊಂದು ಪಕ್ಷಾ ಕಟ್ಟಿ, ಬಡಿದಾಡಿ, ಈ ಕಾಯಿದೇ ರದ್ದು ಮಾಡಿಸಬೇಕನಸತsದ ! ಅದಕ್ಕಾಗಿ ಅಸೆಂಬ್ಲೀ ಮೇಂಬರ್ ಆಗಬೇಕಂತ ನನ್ನ ಆ್ಯಂಬಿಶನ್ ಏನ್ರಿ !

**ರಾಜ:**– ಭಲಾ ಮಗನs, ನಿಮ್ಮ ವತನದಾರೀ ರಕ್ತ ಎಲ್ಲಿ ಹೋದೀತು ? ಅಲ್ಲಲೇ, ಮೂರು ವರ್ಷಾತು ನೋಡತೀನಿ—ಸಾಲ್ಯಾಗ ಕಲ್ತು, ಮನ್ಯಾಗ ಕಲ್ತು— ‘(Sit) ಸಿಟ್’ ಅಂದರ ನಾಮಪದಾ ಅಂತ ಹೇಳೂ ಪಂಡಿತ ನೀನು ! ಮಾಸ್ತರs ಬ್ಯಾಸತ್ತು ಮ್ಯಾಲ ಹಾಕಿದರಂತ, ಎರಡನೆಯೆತ್ತಾಕ ಏರಿದಾಂವ ! ಅಸೆಂಬ್ಲಿ ಅಂದರ, ಅದೇನು ‘ಹುಡುತುತು’ ಆಟಾ ಅಂತ ಮಾಡೀದೀ ಏನು ?

( ಹುಡುಗರು ಖೊಳ್ಳನೆ ನಗುವರು. )

**ಮ. ಮಾಸ್ತರ:**– ಹುಂ, ಇನ್ನ ನಗೀ ನಿಲ್ಲಿಸಿರಿ ! ಏ ಕಿಟ್ಟ್ಯಾ, ನೀ ಏನಾಗಬೇಕಂತೀ, ಹೇಳಪಾ !

**ಕಿಟ್ಟ್ಯಾ:**– ಏ ರಾಜಾ, ನೀ ಇಲ್ಲದ್ದs ಅಂದು ಚಾಷ್ಟೀ ಮಾಡಬ್ಯಾಡಾ ! ನಾ ಮೊದಲ ಹೇಳಿರತೀನಿ ! ಮಾಸ್ತರ, ನನಗ ಸುಪ್ರಸಿದ್ಧ ಕವಿ ಆಗಬೇಕಂತ ಅನಸತsದರಿ ! ಕವಿ ಇದ್ದಂವಗ ಮಾನ ಹೆಚ್ಚು, ಮರ್ಯಾದಿ ಹೆಚ್ಚು ! ರವೀಂದ್ರನಾಥ ಟಾಗೋರರ ಖ್ಯಾತಿ ಲೋಕದೊಳಗೆಲ್ಲಾ ಹಬ್ಬೇದ ! ಈಗ ನಮ್ಮ ನಾಡಿನೊಳಗs ನೋಡ್ರಿ ! ಕೆ. ವಿ. ಪುಟ್ಟಪ್ಪ, ಅಂಬಿಕಾತನಯದತ್ತ,

ಆನಂದಕಂದ – ಇವರೆಲ್ಲಾರ ಹೆಸರೂ ಎಲ್ಲಾರ ಬಾಯೊಳಗೂ ಅದ! ಆದರ ಆಗಬೇಕು ಸುಪ್ರಸಿದ್ಧ ಕವಿ.... ನೋಡ್ರಿ!

**ರಾಜ:–** ಅಬಾಬಾಬಾ! ಸುಪ್ರಸಿದ್ಧ ಕವಿರಾಜ ಕಿಟ್ಟ್ಯಾಕೀ ಜಯ್! ಎಲೇ ಕಿಟ್ಟ್ಯಾ, ಕವೀ ಆಗೂದರೊಳಗ ಏನು ಸುಖಾ ಅದ ಅಂತ ತಿಳಿದೀದಿ? ಆಗ್ಯರೇ ನೋಡು! ಆ ಮ್ಯಾಲ, ಕರಜಿಗೀ ಕಾಟೀಜಿನೊಳಗ ಕೂತು, ವರದಾ ನದೀ ನೀರು ಕುಡದs ಬದಕಬೇಕಾಗತsದ! ಹುಷಾರಾಗಿರು! ಮಾಸ್ತರ, ಈ ನಾಯಕರ ರಂಗೊಬ್ಬ ಉಳದಾನ ನೋಡ್ರಿ ಇನ್ನೂ!

**ಮ. ಮಾಸ್ತರ:–** ಹೌದೋ ರಂಗಾ! ನೀ ಹೇಳಿನ್ನ: ಏನಾಗಬೇಕಂತ ವಿಚಾರ ಅದs ಅಪಾ ನಿಂದು?

**ರಂಗ:–** ನಾ ನೋಡ್ರಿ, ಭಾಳ ದಿನಾ ಆತು ವಿಚಾರ ಮಾಡತೀನಿ! ಯಾವಾಗಲೂ ನನಗ ಅನಸತಿರೂದಂದರ, ಶ್ರೀರಾಮಕೃಷ್ಣ ಪರಮಹಂಸರ ಹಾಂಗ—ಪ್ರಸಿದ್ಧ ಸತ್ಪುರುಷ ಆಗಬೇಕೂ ಅಂತ!

**ರಾಜ:–** ಒಳತನ್ನಲೇ ಮಳ್ಳ! ಪರಮಹಂಸರ್ಹಾಂಗ— ವಿವೇಕಾನಂದ ರ್ಹಾಂಗ ಆಗೂದಂದರ, ಸಂನ್ಯಾಸಿ ಆಗಬೇಕಾಗತsದ ಈಗ ನಿಮ್ಮ ಮನ್ಯಾಗ ನೋಡಿದರ, ಇದs ಬ್ಯಾಸಿಗ್ಯಾಗ ನಿನ್ನ ಮದಿವೀ ಮಾಡಿಬಿಡಬೇಕಂತಾಳ ನಿಮ್ಮ ಅಜ್ಜಿ! ಹೆಣ್ಣು ಸುದ್ಧಾ ನೋಡಿ ಇಟ್ಟಾರಂತ! ಸಂನ್ಯಾಸಿ ಆದ ಮ್ಯಾಲ, ಮಾಡಿಕೊಂಡ ಹೇಣ್ತಿಗೇನ ಹೇಳತೀಯಲಾ! ಏನ ಆಕಿನ್ನೂ ಸುಪ್ರಸಿದ್ಧ ಸತ್‌ಪುರುಷಿನ್ನ ಮಾಡಿಕೊಂಡು, ಜೋಡೀ ಕರಕೊಂಡs ಹೋಗ್ತೀಯೊ?

( ಎಲ್ಲರೂ ಗಟ್ಟಿಯಾಗಿ ನಗುವರು )

**ಮ. ಮಾಸ್ತರು:–** ಏ ರಾಜಾ, ಎಲ್ಲಾರನ್ನೂ ಚಾಷ್ಟೀ ಮಾಡತೀ.... ಈಗ ನಿನ್ನ ಪಾಳೀ ಬಂತು. ನೀ ಏನ ಆಗಬೇಕಂತ ನಿರ್ಣಯ ಮಾಡೀದಿ? ಹೇಳಪಾ ನೋಡೋಣ!

**ರಾಜ:–** ನಾನು? ನನ್ನೇನ ಮಾಡತೀರಿ ಬಿಡ್ರಿ ಮಾಸ್ತರ! ಹೇಳಿ ಕೇಳಿ ಹಳ್ಳಿಯ ಹುಂಬ ನಾನು!

**ಮ. ಮಾಸ್ತರು**:– ಇರಲಿ ಹೇಳೋ! ಇಲ್ಲದ ರಗಳೀ ಹೆಚ್ಚ್ಯಬ್ಯಾಡ! ಈಗ ಎಲ್ಲಾರೂ ಹೇಳಲಿಲ್ಲೇನು ?

**ರಾಜ**:– ಖರೇ ಹೇಳಲ್ರ್ಯಾ ಮಾಸ್ತರ! ನನಗ ಇಂಥಾದಃ ಒಂದು ಆಗಬೇಕಂತ ಭಾಳ ಹೊತ್ತಿನ ವರೆಗೆ ಎಂದೂ ಅನಿಸೂದಿಲ್ಲ. ಹಾರಾಡೂ ಹಕ್ಕೀ ನೋಡತೇನಿ; ಅದ್ಹಾಂಗs ನಾನೂ ಆಕಾಶದೊಳಗ ಹಾರುವ ಹಕ್ಕಿ ಆಗಬೇಕು ಅಂತೀನಿ! ಅರಳಿ ಅರಳಿ ನಗತಿರೂ ಹೂ ನೋಡತೀನಿ; ನಾನೂ ಒಂದು ಹೂವಾಗಿ ಅರಳಿ ನಗತಿರಬೇಕೂ–ಅಂತೀನಿ. ಒಳ್ಳೇ ಸಂಗೀತ ಕಿವಿಗೆ ಬಿದ್ದಾಗ, ನಾನೊಬ್ಬ ಸಂಗೀತಗಾರ ಆಗಬೇಕಂತೀನಿ. ಸುಂದರ ಸುಂದರ ಚಿತ್ರಾ ನೋಡಿದಾಗ, ನಾ ಒಬ್ಬ ಚಿತ್ರಕಾರ ಆಗಬೇಕು ಅಂತೀನಿ. ಸಿನಿಮಾ ನೋಡಿ ಆನಂದ ಆದಾಗ, ನಾನೂ ಒಬ್ಬ ಸಿನೇಮಾ ನಟ ಆಗಬೇಕಂತೀನಿ. ಜಟ್ಟಿಗಳ ಕುಸ್ತೀ ನೋಡಿದ ಹುರುಪಿನೊಳಗ, ನಾನೂ ಒಬ್ಬ ಪೈಲ್‌ವಾನ್ ಆಗಬೇಕಂತ ಅಂದಕೋತೀನಿ. ಬ್ಯಾನಿ ಬಿದ್ದು ಬಳಲತಿರೋ ಬಡವರನ್ನ ನೋಡಿದಾಗ, ನಾ ಒಬ್ಬ ಡಾಕ್ಟರ್ ಆಗಬೇಕೂ ಅಂತ ವಿಚಾರ ಮಾಡತೀನಿ, ಬರಿ ಹೊಟ್ಟೆಂದ ತಿರುಗೂ ಭಿಕ್ಷಾದವರನ್ನ ನೋಡಿದಾಗ, ನಾವೊಬ್ಬ ಕೋಟ್ಯ-ಧೀಶ ಶ್ರೀಮಂತ ಆಗಬೇಕೂ ಅಂತ ಆಲೋಚನೀ ಮಾಡತೀನಿ. ಪ್ರಿತಿಯಿಂದ ಇರೂ ಸಂಸಾರಾ ನೋಡಿದಾಗ, ನಾನೂ ಮದುವಿ ಆಗಿ ಸಂಸಾರಿಗ ಆಗಬೇ-ಕಂತೀನಿ; ಬಡದಾಟದ ಬದುಕು ಕಣ್ಣಿಗೆ ಬಿದ್ದಾಗ, ಸಂನ್ಯಾಸಿ ಆಗಿ ನಿಶ್ಚಿಂತಿಂದ ಇರಬೇಕಂತ ಅಪೇಕ್ಷಾ ಮಾಡತೀನಿ. ಪೋಸ್ಟ್‌ಮನ್ನರನ್ನ ಕಂಡಾಗ, ನಾನೂ ಪೋಸ್ಟ್‌ಮನ್ನಾಗಿ ಪತ್ರಾ ಹಂಚತಿರಬೇಕಂತೀನಿ; ಭರ್‍ರಂತ ಹೋಗೂ ಮೋಟಾರು ಕಂಡಾಗ, ನಾನೂ ಒಬ್ಬ ಡ್ರಾಯ್ವರ ಆಗಬೇಕಂತ ಆತುರಪಡತೀನಿ— ಮಾಸ್ತರ! ಹೀಂಗ ಹೇಳತ್ಯ ಹೊದರ, ವ್ಯಾಖ್ಯಾನಃ ಸಾಲಲಿಕ್ಕಿಲ್ಲ. ಹೊತ್ತಾತಿನ್ನ ಮನೀಗೆ ಹೋಗೋಣ ಏಳ್ರಿ! ಏ, ಡಾಕ್ಟರ್ ಶೀನಿ, ಪ್ಲೇಗು–ಕಾಲರಾ ನಿನ್ನ ಕರೀತಾವ ನಡಿ! ಮತ್ತ ವಕೀಲ ನಾನಾಸಾಹೇಬ್! ನಿಮ್ಮ ಮೊಕದ್ದಮಾ, ಕೈಫೀಯತ್ತು, ಹುಕುಮ್‌ನಾಮಾ, ಸೆಶನ್ಸ್ ಕಮಿಟಿ, ಸಮನ್ಸ್ ಬಜಾವಣಿ........ ...

( ಎಲ್ಲರೂ ನಗುವರು. )

**ಮು. ಮಾಸ್ತರು:–** ಆಯಿತು, ಇಂದಿನ ಕಾರ್ಯಕ್ರಮವನ್ನ ಇನ್ನ ಮುಗಿಸೋಣ ! ಎಲ್ಲರೂ ನಿಮ್ಮ ನಿಮ್ಮ ಅಪೇಕ್ಷಾ ತಿಳಿಸಿದಿರಿ. ಆದರ ರಾಜನ ಹಾಂಗ ಹುಡುಗರ ಮನಸ್ಸು ಬ್ಯಾರೇ ಬ್ಯಾರೇ ಸೊಗಸು–ಸೌಂದರ್ಯ ತಿಳದು ಅನುಭವಿಸತಿರೋದು ಹುಡುಗರ ಮುಂದಿನ ಜೀವನಕ್ಕ ಒಳ್ಳೇದು ! ಈಗ ಪ್ರಾರ್ಥನಾ ಮುಗಿಸಿ ಹೊರಟು ಬಿಡೋಣ !

**ಎಲ್ಲರೂ:–** ಹೌದರಿ ! ಇಲ್ಲೇ ಮುಗಿಸೇ ಬಿಡೋಣ್ರಿ !

ಓಂ ಸಹನಾವವತು ಸಹನೌಭುನಕ್ತು
ಸಹವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ ॥
ಓಂ ಶಾಂತಿಃ ಶಾಂತಿಃ ಶಾಂತಿಃ !

**ಜಯ್ ಹಿಂದ !**

---

# ಇದೇ ಲೇಖಕರ ಬೇರೆ ಗ್ರಂಥಗಳು

## ಕವನಸಂಗ್ರಹ

ಮುದ್ದನ ಮಾತು
ಅರುಣೋದಯ
ವಿರಹಿಣಿ
ಒಡನಾಡಿ

## ಕಥಾಸಂಗ್ರಹ

ಬಡತನದ ಬಾಳು
ಸಂಸಾರ ಚಿತ್ರ
ನಮ್ಮ ಬದುಕು
ಮಾತನಾಡುವ ಕಲ್ಲು

## ಕಾದಂಬರಿ

| | |
|---|---|
| ಸುದರ್ಶನ | (ಸಾಮಾಜಿಕ) |
| ರಾಜಯೋಗಿ | (ಐತಿಹಾಸಿಕ) |
| ಅಶಾಂತಿಪರ್ವ | ( ,, ) |

## ಇತರ

| | |
|---|---|
| ಕರ್ನಾಟಕ ಜನಜೀವನ | (ಸಂಶೋಧನಾತ್ಮಕ) |
| ಹಳ್ಳಿಗರ ಹಾಡು | (ಜನಪದ ಸಾಹಿತ್ಯ) |
| ಬಸವಣ್ಣನವರ ಚರಿತ್ರೆ | (ಮಕ್ಕಳಿಗಾಗಿ) |
| ಭಾವಗೀತ | (ಭಕ್ತಿಗೀತ ಸಂಕಲನ) |

## ಅಚ್ಚಿಗಾಗಿ ಸಿದ್ಧವಾದುವು

| | |
|---|---|
| ಕಾರಹುಣ್ಣಿವೆ | (ಕವನ ಸಂಗ್ರಹ) |
| ಸಾಮಾಜಿಕನ ಸಂವಚನ. | (ವಚನ ಸಂಗ್ರಹ) |
| ಸಾಹಿತ್ಯಪ್ರಬಂಧಗಳು | (ವಿವಿಧ ವಿಷಯಕ) |